# ಮಹಾಮನೆ



ಸಂಪುಟ : ೭ ಜೂನ್ ೨೦೦೫ ಸಂಚಿಕೆ : ೧೧ ಬೆಲೆ : ರೂ. ೧೦/-

## ಆತಂಕದ ಸಮಾಜದ ನಿರೀಕ್ಷೆಗಳು

### ರಾಜ್ಯಮಟ್ಟದ ಚಿಂತನ ಸಂಕಿರಣ

ದಿನಾಂಕ ೮.೫.೨೦೦೫ರಂದು ಶಿವಮೊಗ್ಗದಲ್ಲಿ ನಡೆದ ರಾಜ್ಯಮಟ್ಟದ ಚಿಂತನ ಸಂಕಿರಣದ ಉದ್ಘಾಟನೆ- ವೇದಿಕೆಯಲ್ಲಿ ಮಾಜಿ ಶಾಸಕ ಹೆಚ್.ಎಂ. ಚಂದ್ರಶೇಖರಪ್ಪ, ಕೇಂದ್ರ ಸಚಿವ ಎಂ.ವಿ. ರಾಜಶೇಖರನ್, ನ್ಯಾಯಮೂರ್ತಿ ಡಾ.ವಿ.ಎಸ್. ಮಳಿಮಠ ಗೊ.ರು.ಚ, ಪೂಜ್ಯ ಸಿರಿಗೆರೆ ಡಾ. ಶ್ರೀ. ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು, ಶಾಸಕ ಕುಮಾರ ಬಂಗಾರಪ್ಪ ಎ.ಎಸ್. ರುದ್ರಮುನಿ, ಹೆಚ್.ಎ. ಮಧು ಮತ್ತು ಹೆಚ್.ಎಂ. ಮಲ್ಲಪ್ಪ

(ವರದಿ : ಪುಟ-೫)




**ಕರ್ನಾಟಕದ ಲಿಂಗಾಯತರು**



**ನಾವು ಕಾನೂನಿನ ಪಕ್ಷ**

**ಧರ್ಮ ಮತ್ತು ವಿಜ್ಞಾನ**



**ಐಹಿಕ ಆಸೆಗೊಂದು ಸವಾಲು**

## ಮನವಿ

### ಲೇಖಕರಲ್ಲಿ ಬಿನ್ನಹ

- ✤ 'ಮಹಾಮನೆ'ಯಲ್ಲಿ ಶರಣ ಸಾಹಿತ್ಯ - ಸಂಸ್ಕೃತಿಗೆ ಸಂಬಂಧಿಸಿದ ಉಪಯುಕ್ತ ಲೇಖನಗಳನ್ನು ಪ್ರಕಟಿಸಲಾಗುತ್ತದೆ.
- ✤ ಶರಣ ಕ್ಷೇತ್ರ ಪರಿಚಯ, ಶರಣ ಸಾಹಿತಿಗಳ ಪರಿಚಯ, ಶರಣ ಸಾಹಿತ್ಯ ಕೃತಿಗಳ ಪರಿಚಯದ ಲೇಖನಗಳು 'ಮಹಾಮನೆ'ಯ ಎರಡು ಪುಟಗಳಿಗೆ ಮೀರಬಾರದು.
- ✤ ವಿಷಯ ವಿಶ್ಲೇಷಣೆ ಅಥವಾ ವ್ಯಾಖ್ಯಾನ ಸಂಬಂಧ ಲೇಖನಗಳು ಮುದ್ರಿತ ೩-೪ ಪುಟಗಳಿಗೆ ಮೀರಬಾರದು.
- ✤ ವಚನ ಸಾಹಿತ್ಯ ಅಥವಾ ಶರಣರ ಜೀವನವನ್ನು ಪ್ರತಿಬಿಂಬಿಸುವ ರೇಖಾ ಚಿತ್ರಗಳಿಗೆ ಅವಕಾಶವುಂಟು.
- ✤ ಶರಣ ಕ್ಷೇತ್ರ ಅಥವಾ ಶರಣ ಸಾಹಿತಿಗಳನ್ನು ಕುರಿತ ಲೇಖನಗಳೊಡನೆ ಸಂಬಂಧಪಟ್ಟ ಛಾಯಾಚಿತ್ರಗಳನ್ನು ಕಳುಹಿಸುವುದು ಅಪೇಕ್ಷಣೀಯ.
- ✤ ಲೇಖನಗಳನ್ನು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಬೇಕು; ಅಕ್ಷರಗಳು ಸ್ಫುಟವಾಗಿರಬೇಕು.
- ✤ ಆಧುನಿಕ ವಚನಕಾರರು ತಮ್ಮ ಹೊಸ ವಚನಗಳನ್ನು ಪ್ರಕಟಣೆಗೆ ಕಳುಹಿಸಬಹುದು.

### ಅನುಭವ ಮಂಟಪ

- ✤ ಮಹಾಮನೆಯ ಈ ಅಂಕಣದಲ್ಲಿ ಪ್ರಶ್ನೋತ್ತರಗಳಿಗೆ ಅವಕಾಶ ಕಲ್ಪಿಸಲಾಗಿದೆ. ಇದೊಂದು ಮುಕ್ತ ವಿಚಾರ ವಿನಿಮಯ.
- ✤ ಪ್ರಶ್ನೆಗಳು ಗಂಭೀರವಾಗಿರಬೇಕು. ಮುಖ್ಯವಾಗಿ ಶರಣ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿರಬೇಕು. ಪ್ರಶ್ನೆಗಳು ಸ್ಪಷ್ಟ ಹಾಗೂ ಸಂಕ್ಷಿಪ್ತವಾಗಿರಬೇಕು.
- ✤ ವೈಯಕ್ತಿಕ ವಿಷಯಗಳ ಪ್ರಸ್ತಾಪಕ್ಕೆ ಅವಕಾಶವಿಲ್ಲ. ಪ್ರಶ್ನೆಗಳಲ್ಲಿ ಸಾಮೂಹಿಕ ಹಿತದೃಷ್ಟಿಯಿರಬೇಕು.
- ✤ ವರ್ಷದ ಕೊನೆಯಲ್ಲಿ ಆಯ್ದ ಪ್ರಶ್ನೋತ್ತರಗಳಿಗೆ ಒಂದು ಸಂಗ್ರಹವನ್ನು ಗ್ರಂಥ ರೂಪದಲ್ಲಿ ತರುವ ವಿಚಾರವಿದೆ.
- ✤ ಶರಣ ಸಿದ್ಧಾಂತದ ತಾಂತ್ರಿಕ ಅಂಶಗಳಿಗೆ ಸಂಬಂಧಿಸಿದಂತೆಯೂ ಪ್ರಶ್ನೆಗಳನ್ನು ಕೇಳಬಹುದು.
- ✤ ಪ್ರಶ್ನೆಗಳನ್ನು ಒಂದು ಅಂಚೆ ಕಾರ್ಡಿನಲ್ಲಿ ಬರೆದು ಕಳುಹಿಸಿದರೆ ಸಾಕು. ಪ್ರಶ್ನೆ ಕೇಳುವವರು ತಮ್ಮ ಪೂರ್ಣ ಅಂಚೆ ವಿಳಾಸ ತಿಳಿಸಬೇಕು.

## ಗ್ರಂಥ ವಿಮರ್ಶೆ

✤ 'ಮಹಾಮನೆ'ಯಲ್ಲಿ ಶರಣ ಸಾಹಿತ್ಯ ಮತ್ತು ಸಂಬಂಧಿಸಿದ ಹೊಸ ಪ್ರಕಟಣೆಗಳ ಸಾದರ ಸ್ವೀಕಾರಕ್ಕೆ ಅವಕಾಶವುಂಟು. ಅಂಕಣದ ಪ್ರಕಟಣೆಗೆ ಲೇಖಕರು / ಪ್ರಕಾಶಕರು ತಮ್ಮ ಕೃತಿಗಳ ಒಂದೊಂದು ಪ್ರತಿಯನ್ನು ಕಳುಹಿಸಬೇಕು.

✤ ವಿಮರ್ಶೆಗಾದರೆ ಪ್ರತಿಯೊಂದು ಕೃತಿಯ ಎರಡೆರಡು ಪ್ರತಿಗಳನ್ನು ಕಳುಹಿಸಬೇಕು. ಅಂತಹ ಕೃತಿಯ ಶೀರ್ಷಿಕಾ ಪುಟದಲ್ಲಿ "ವಿಮರ್ಶೆಯ ಕೃಪೆಗಾಗಿ" ಎಂದು ಬರೆದಿರಬೇಕು.

ವಿ.ಸೂ. ಲೇಖಕರು / ಪ್ರಕಾಶಕರು ಶರಣ ಸಾಹಿತ್ಯ ಪರಿಷತ್ತಿಗೆ ಕಳುಹಿಸುವ ಕೃತಿಗಳನ್ನು ಪರಿಷತ್ತಿನ ಸಾಹಿತ್ಯ ಭಂಡಾರದಲ್ಲಿಟ್ಟು ಓದುಗರಿಗೆ ಆಕರ ಸೌಲಭ್ಯ ಒದಗಿಸಲಾಗುತ್ತದೆ.

ಶರಣ ಸಾಹಿತ್ಯಕ್ಕೆ ಯಾವುದೇ ಕೃತಿಯನ್ನು (ಹಳೆಯದಿರಲಿ, ಹೊಸದಿರಲಿ, ಹಸ್ತಪ್ರತಿಯಿರಲಿ) ಕೊಡುಗೆಯಾಗಿ ಶರಣ ಪರಿಷತ್ತಿನ ಭಂಡಾರಕ್ಕೆ ಕಳುಹಿಸಬಹುದು.

ಸಂಪರ್ಕ ವಿಳಾಸ : ಸಂಪಾದಕರು, 'ಮಹಾಮನೆ', ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
೧೧ನೆಯ ಮುಖ್ಯರಸ್ತೆ, ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦ ೦೭೦



# ಮಹಾಮನೆ

ಸಂಪುಟ : ೭    ಜೂನ್ ೨೦೦೫    ಸಂಚಿಕೆ : ೧೧

*ಅಧ್ಯಕ್ಷರು :*
ಗೊ.ರು. ಚನ್ನಬಸಪ್ಪ
*ಸಂಪಾದಕರು :*
ಎಂ.ಜಿ. ನಾಗರಾಜ್
ಎಚ್.ಎಸ್. ಸಿದ್ಧಗಂಗಪ್ಪ
*ಪ್ರಕಾಶಕರು :*
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

ಆಡಳಿತ ಕಛೇರಿ
೧೧ನೆಯ ಮುಖ್ಯರಸ್ತೆ, ೮ನೆಯ ವಿಭಾಗ
ಶಿವರಾತ್ರೀಶ್ವರ ವೃತ್ತ
ಜಯನಗರ, ಬೆಂಗಳೂರು - ೫೬೦ ೦೭೦
ದೂರವಾಣಿ : ೨೬೫೪ ೯೩೯೪
*ಮುದ್ರಕರು :*
**ಲಕ್ಷ್ಮೀ ಮುದ್ರಣಾಲಯ**
೫ನೆಯ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - ೫೬೦ ೦೧೮

***ಲೇಖಕರ ಅಭಿಪ್ರಾಯಗಳೆಲ್ಲ ಪರಿಷತ್ತಿನ ಅಭಿಪ್ರಾಯಗಳಲ್ಲ***

## ಬಾಗಿಲು ತೆರೆದರೆ .......



### 'ಮಹಾಮನೆ'ಯ ಬಾಗಿಲು ತೆರೆದರೆ ........

- * *ಅಧ್ಯಕ್ಷರ ನುಡಿ, ಸಂಪಾದಕೀಯ ಬರಹಗಳು*
- * *ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕೇಂದ್ರ ಚಟುವಟಿಕೆಗಳು*
- * *ಶರಣ ಸಾಹಿತ್ಯ ಕೃತಿಗಳು ಮತ್ತು ಶರಣ ಕ್ಷೇತ್ರಗಳ ಪರಿಚಯ*
- * *ಶರಣ ಸಾಹಿತ್ಯದಲ್ಲಿ ಕ್ಷೇತ್ರ ದುಡಿದ, ದುಡಿಯುತ್ತಿರುವ ಮಹನೀಯರ ಪರಿಚಯ*
- * *ಆಯ್ದ ವಚನಗಳು ಮತ್ತು ಅವುಗಳ ವಿಶ್ಲೇಷಣೆ*
- * *ಶರಣ ಸಾಹಿತ್ಯ - ಸಂಸ್ಕೃತಿಗಳಿಗೆ ಸಂಬಂಧಿಸಿದ ಹೊಸ ಶೋಧಗಳು*
- * *ಶರಣ ಸಾಹಿತ್ಯ ಕೃತಿಗಳ ಸಾದರ ಸ್ವೀಕಾರ ಮತ್ತು ವಿಮರ್ಶೆ*
- * *ಶರಣ ಸಾಹಿತ್ಯ ಕುರಿತ ಪ್ರೌಢ ಲೇಖನಗಳು*
- * *ಆಧುನಿಕ ವಚನಕಾರರ ಹೊಸ ವಚನಗಳು*
- * *ಓದುಗರೊಡನೆ ಸಂವಾದ - ಪ್ರಶ್ನೋತ್ತರ ವೇದಿಕೆ*
- * *ಶರಣ ಸಿದ್ಧಾಂತ : ತಾಂತ್ರಿಕ ಅಂಶಗಳ ವ್ಯಾಖ್ಯಾನ - ಇತ್ಯಾದಿ*



*ಸಂಪಾದಕೀಯ*

# ಸಾಂಸ್ಕೃತಿಕ ಸವಾಲುಗಳು

ಸವಾಲು: ಬದುಕಿನ ಸುಕ್ರಿಯೆಗೆ ಅಣಿಯಾಗಿಸುವಂಥದ್ದು; ಚೈತನ್ಯದ ಜಾಗೃತಿಗೆ ಇಂಬಾಗುವಂಥದ್ದು. ಅದು ಸದಾ ನೆಮ್ಮದಿಗೇಡಿ, ಒತ್ತಡ ಧಾವಂತಿಕೆ ಎಂದು ಭಾವಿಸುವಂಥದ್ದಲ್ಲ. ಅದು ಸಂಚಲನಕ್ಕೊಂದು ಮುನ್ನುಡಿ; ಚರ್ಯೆಗೊಂದು ಸತ್ಕಾರಣ; ಜಂಗಮಕ್ಕೊಂದು ಸತ್ವ ಚಾಲನೆ-ಇದೆಲ್ಲ ಸಾಂಸ್ಕೃತಿಕ ಸವಾಲುಗಳಲ್ಲೂ ಉಂಟು. ಜಡವನ್ನು 'ಚೇತನದ ಲೀಲೆ' ಎಂಬ (ಕಾವ್ಯ-ವಿಜ್ಞಾನ ಪೂರಕ) ಸಮಾಧಾನಿಕ ಸಂಕೇತದಲ್ಲಿಯೇ ಉಳಿಸಿಕೊಳ್ಳದೆ, ಅದರ ಸುಪ್ತಶಕ್ತಿಯ ವಿಕಸನ ಲೀಲೆಯಾಗಿ ಪರಿವರ್ತಿಸುವುದೆ ಸಾಂಸ್ಕೃತಿಕ ಸವಾಲು; ಇದು ಕಾವ್ಯಭಾವ ಮೀರಿ ವರ್ತಮಾನ ಸ್ಪಂದಿಯಾಗುತ್ತದೆ. ಅನುಭವ ಪ್ರಮಾಣದ ಅನುಭಾವಿಕ ವ್ಯಾಖ್ಯಾನದಂತೆ ವರ್ತಮಾನದ ಅನುಸಂಧಾನಕ್ಕೆ, ಅನುಸರಣೆಗೆ ತೋರುಗಂಬವೂ ಆಗುತ್ತದೆ. ಇಂದಿನ ಜಗತ್ತಿನ ಎಲ್ಲ ವಲಯಗಳಲ್ಲಿ ಸಾಂಸ್ಕೃತಿಕ ಸವಾಲುಗಳು ಮೈ ತಳೆದಿವೆ. ಜಾಗತೀಕರಣದ ಸಡಗರದಲ್ಲಿ ಇದು ನಿತ್ಯದ ಬಾಳುವೆ ಎನುವಂತಾಗಿದೆ. ಜೊತೆಗೆ ಮಿತಿಗಳ ಅಪವಾದ ಅದಕ್ಕಿಲ್ಲವೆನ್ನುವಂತಿಲ್ಲ. ಸವಾಲು, ಸ್ಪರ್ಧೆಯ ಸಾಂಸ್ಕೃತಿಕ ಆಹ್ವಾನವಾದರೆ ಮಾತ್ರ ಅದು ಸೊಬಗು. ಸಮಾನ ಅವಕಾಶ, ಸನ್ನಿವೇಶದಲ್ಲಿ ಸವಾಲಿಗೆ ನೈತಿಕತೆ ಇರುತ್ತದೆ. ಅಸಮಾನ ಅವಕಾಶಗಳ ನಡುವೆ, ಸನ್ನಿವೇಶಗಳ ನಡುವೆ ಸವಾಲು-ಸ್ಪರ್ಧೆ ಎರಚಾಡಿದರೆ ಅನೈತಿಕ. ಇಲ್ಲಿ ಸಮಾನ ಅವಕಾಶಿತರು ಎಂದಾಗ ಅರ್ಹ ಸೌಲಭ್ಯಗಳು, ಸನ್ನಿವೇಶಗಳಿಂದ ವಂಚಿತರಲ್ಲದವರು ಎಂಬ ಪರಿಗಣನೆ ಆಗುತ್ತದೆ. ಈ ನಿಟ್ಟಿನಲ್ಲಿ ಅಭಿವೃದ್ಧಿಸಿದ್ಧಿ ರಾಷ್ಟ್ರ, ಅಭಿವೃದ್ಧಿಸಾಧಕ ರಾಷ್ಟ್ರಗಳ ರೈತ ವಲಯ ಒಂದು ಗಮನಾರ್ಹ ಸಂಕೇತವಾಗುತ್ತದೆ. ಸ್ವಾರ್ಥದ ಉಸುಬಿನಲ್ಲಿ 'ಗ್ರೀನ್‌ಬಾಕ್ಸ್, ಬ್ಲೂಬಾಕ್ಸ್' ಎಂದು ನೆರವು ನೀಡಿ ಗರಿಷ್ಠ ಸಬ್ಸಿಡಿಯನ್ನು ತನ್ನ ರೈತರಿಗೆ ನೀಡುವ ಅಭಿವೃದ್ಧಿಸಿದ್ಧಿ ರಾಷ್ಟ್ರ, ಅದೇ ಅಭಿವೃದ್ಧಿಸಾಧಕ ರಾಷ್ಟ್ರಗಳ ರೈತರಿಗೆ ಕಡಿತಗೊಳಿಸಿ ಕನಿಷ್ಠ ಸಬ್ಸಿಡಿ 'ನೀಡಿಕೆ'ಗೆ ಒತ್ತಾಯಿಸುವುದು, 'ಅನಿವಾರ್ಯ ತ್ಯಾಗದ' ಪಾಠ ಹೇಳುವುದು ಎಂಥ ನೈತಿಕತೆ! ಇದು WTO ಸಮ್ಮೇಳನದಲ್ಲಿ ನಡೆದು ಬಂದಿರುವ ಶ್ರೀಮಂತ ರಾಷ್ಟ್ರಗಳ ವ್ಯಾಪಾರೀ ಸ್ವಾರ್ಥದ ಸಾಂಸ್ಕೃತಿಕ ವಂಚನೆ. ಇಲ್ಲಿಯೆ ಸಾಂಸ್ಕೃತಿಕ ಸವಾಲುಗಳು ಎದುರಾಗುತ್ತವೆ. ಒತ್ತಾಸೆಯಲ್ಲಿ ನೆರವು ಪಡೆವ ವೈಭವದ ಬದುಕಿಗೂ ಬಡತನದಲ್ಲಿ ನರಳಿಯೂ ಸಮರ್ಥ ಉತ್ಪನ್ನ ತೋರುವ ಬದುಕಿಗೂ ಕಂದರವೇರ್ಪಟ್ಟು, ಹೊಂದಾಣಿಕೆಯಂಥ ಸಾಂಸ್ಕೃತಿಕ ಸೊಬಗಿಲ್ಲದೆ, ಕೊರಗುಗಳಿಗೆ ಅವಕಾಶವಾಗುತ್ತದೆ. ಇಂಥ ಕಡೆ 'ಅರ್ಹ' ಉಳಿಯುತ್ತಾನೆ-survival of the fittest-ಎಂಬುದು ಪಕ್ಷಪಾತದ ಹೇಳಿಕೆಯಾಗುತ್ತದೆ. ಕೊಬ್ಬಿದ ಗೂಳಿಯ ಬಾಲಕ್ಕೆ ಬೆಣ್ಣೆ ಹಚ್ಚುವುದಲ್ಲ 'ಅರ್ಹತೆ'; ಅಂತಾದರೆ ಅದು ಗೋಸುಂಬೆಯ ಪಾತ್ರ. ಹೀಗಾಗಿ ಮಾನವ ಧರ್ಮದ ಸಾಂಸ್ಕೃತಿಕ ಪಾತಳಿಯಲ್ಲಿ ನಮ್ಮ ಶಕ್ತಿಯುತ ಚರ್ಯೆಗಳ ಸವಾಲು ಆಗಬೇಕು. ಅಸಿಯಾನ್ WTO ಸಮ್ಮೇಳನದಲ್ಲಿ ಹೀಗಾಗಿ ನಾವು ಗೆದ್ದೆವು. ಈ ಸಂದರ್ಭಕ್ಕಾಗಿ ಅಂತರ್ ಸಂಸ್ಕೃತಿ ಪ್ರಭಾವಿತ (Enculturation-ಒಳ ಅಥವಾ ದೇಸೀ ಸಂಸ್ಕೃತೀಕರಣ ಅಂತರ್ದೇಶೀಯ ಸಂಸ್ಕೃತೀಕರಣ); ಪರಸಂಸ್ಕೃತಿಯಿಂದ ಪ್ರಭಾವಿತ (acculturation ಅನ್ಯ ಅಥವಾ ಪರಸಂಸ್ಕೃತೀಕರಣ) ಅಂಶಗಳು ಗಮನಕ್ಕೆ ಬರುತ್ತವೆ. ನಮ್ಮ ನಮ್ಮಲ್ಲಿಯೆ ಇರುವ ಆಚಾರ ವಿಚಾರಗಳ, ನಡೆನುಡಿ, ವೇಷಭೂಷ, ಧಾರ್ಮಿಕ ಶ್ರದ್ಧೆ, ಊಟ ಉಣಿಸಿನ ಪದ್ಧತಿಗಳ ವಿಭಿನ್ನ ವೈವಿಧ್ಯಗಳಲ್ಲಿ ಅಗತ್ಯವಾದವುಗಳನ್ನು ಮೊಗೆದು ತಮ್ಮದನ್ನಾಗಿ ಮಾಡಿಕೊಳ್ಳುವುದು ಅಥವಾ ಗ್ರಹಿಸುವುದು ದೇಸೀ ಸಂಸ್ಕೃತೀಕರಣವೆ. ಇದರಲ್ಲಿ ಹೊಸ ರೂಪಗಳನ್ನು ಕಡೆದು ತೋರಿಸಬಹುದು.

ನಮ್ಮ ಶಿವಾಚಾರ್ಯರು, ಶಿವಶರಣರು ತಮ್ಮ ಶಿವ ಸಂಸ್ಕೃತಿಯಲ್ಲಿ ಇಂಥ ಹೊಸ ರೂಪವನ್ನು ಕಡೆದುಕೊಟ್ಟರು; ಸಾಂಸ್ಕೃತಿಕ ಸವಾಲುಗಳಿಗೆ ಉತ್ತರಗಳನ್ನು ಕಟ್ಟಿಕೊಟ್ಟರು; ಈ ನೆಲದ ಸಂಸ್ಕೃತಿಯಲ್ಲಿ ಪ್ರಾದುರ್ಭವಿಸಿದ ವಿಭೂತಿ ಕುಸುಮಗಳಾದರು. ಕೈಲಾಸದ ಶಿವನನ್ನು ತಮ್ಮ ನೆಲದ ಶಿವನನ್ನಾಗಿಸಿದರು, ದೇಸೀ ರೂಪ ಕೊಟ್ಟರು. ಋಗ್ವೇದದ 'ಅಯಂ ಮೇ ಹಸ್ತೋ ಭಗವಾನ್'ನನ್ನು ಕಂಡರು; ಪರಾಕಾಶದ ಪರಶಿವನನ್ನು ಕೈಯಲ್ಲಿನ ಲಿಂಗವಾಗಿ ಮಾಡಿಕೊಂಡು ತೋರಿದರು. ಇದು ಸಾಂಸ್ಕೃತಿಕ ಸವಾಲಿನಲ್ಲಿ ತೋರಿದ ಸಮರಸ ಕ್ರಿಯೆ. ಅಂತರ್ ಸಂಸ್ಕೃತೀಕರಣದ ಸತ್ಕ್ರಿಯೆ. ಈ ಮಜಲುಗಳ ಕಾರಣ ಮಾಳ ಹಾಗು ತಳದಲ್ಲಿರಿಸಿದ್ದ ಜಾತಿಯ ಜನರನ್ನೆಲ್ಲ ಲಿಂಗಯ್ಯನೆಡೆಯಲ್ಲಿ ಶಿವಸನ್ನಿವೇಶದಲ್ಲಿ ಸಮಾನವಾಗಿರಿಸಿಕೊಂಡು ನಡೆದು ತೋರಿದರು. ತಮ್ಮ ನೆಲದ ಮಗದೊಂದರಲ್ಲಿ ಆಗತ್ಯ ಸೂಕ್ತವಾದುದನ್ನು ಮೊಗೆದು ಅಳವಡಿಸಿಯೂ ಹೊಸ ನೇಯ್ಗೆಯನ್ನು ಕೊಟ್ಟು ತಮ್ಮ ಅಸ್ತಿತ್ವಮೌಲ್ಯ ತೋರಿದರು; ಹೊಸ ಆಯಾಮಗಳನ್ನು ಪುನರುತ್ಥಾನ ರೂಪದಲ್ಲಿ ತೋರಿದರು. ಇದು ಎಂದಿನ ಕೇವಲ ಗ್ರಹಿಕೆಯ Enculturation ಸೂತ್ರಕ್ಕಿಂತ ಹೆಚ್ಚಿನ ಮೆರುಗಿನದಾಗಿದೆ. ಇಂದು ನಮ್ಮ ಸಾಹಿತ್ಯ, ಶಿಲ್ಪ, ಜಾನಪದ, ನಾಟ್ಯ, ಚಿತ್ರಕಲೆ, ಪುರಾಣ, ಇತಿಹಾಸ ಇತ್ಯಾದಿ ಎಲ್ಲ ಸಾಂಸ್ಕೃತಿಕ ಆಯಾಮಗಳಲ್ಲಿ 'ಸಕಲ' ರೂಪದಲ್ಲಿ ಶಿವಾಚಾರ್ಯರು-ಶಿವಶರಣರು ಅಡಕಗೊಂಡಿರುವುದು ನಮ್ಮ ಇಂಥ ಸಾಂಸ್ಕೃತಿಕ ಸಾಮರಸ್ಯದ ಫಲವೇ ಆಗಿದೆ. ಶರಣರು-ಆಚಾರ್ಯರು ಕಾಶ್ಮೀರದಿಂದ ಹಿಡಿದು ಕೇರಳದ ಕಡೆಯಲ್ಲೆಲ್ಲ ಇದ್ದವರು. ತಮ್ಮ ತಮ್ಮ ಪದ್ಧತಿಗಳ ಸಮಪಾಕ ಮಾಡಿ ಬೆಳೆದು ಬಾಳಿದರು. 'ಲಿಂಗಯ್ಯ' ಎಲ್ಲರಿಗೂ 'ಇಷ್ಟ'ವಾಗಲಾಗಿ ಶಿವನ ಸ್ವರೂಪವನ್ನು ಅಗಾಧವಾಗಿ, ಮಹತ್ತಾಗಿ ಕಂಡುಕೊಂಡರು. ಒಟ್ಟೊಟ್ಟಾಗಿ ಸಾರವಾದರು. ಆದರೆ ಅವರು ಮಾಡಿದ ಒಟ್ಟುತನವನ್ನು ಇಂದು ತೊಟ್ಟು ಮಾಡಹೊರಟಿದ್ದೇವೆ. ಕುಂಭತೀರ್ಥವನ್ನು, ಕುಡಿಕೆ ಹನಿಯಾಗಿ ಮಾಡಹೊರಟಿದ್ದೇವೆ. ಆಚಾರಭೇದವಿರಲಿ, ವಿಚಾರ ಭೇದವಿರಲಿ, ಏನೇ ಇರಲಿ ಸಮರಸದ ಬಾಳುವೆಯಲ್ಲಿ ವಿಶಾಲ ಶಿವನಿರಲಿ.

*ಬೇರು ಗಿಡದ ಭೂಮಿಯೊಳಡಗಿತ್ತು; ನೆಲದ ಜಲವ ಹೀರಿತ್ತು*
*ತೊಗಟೆ ಗಿಡದ ಮೈಯ ಮುಚ್ಚಿತ್ತು; ಸಾವಯವ ಕಾವಲಾಗಿತ್ತು.*
*ರೆಂಬೆ ಗಿಡದ ಅಂಗವಾಗಿತ್ತು; ಕಿರಣಕ್ಕೆ ಮೈಯ ಚಾಚಿತ್ತು*
*ಎಲೆ ಗಿಡದಲ್ಲಿ ಹರಡಿತ್ತು;*
*ಗಾಳಿಯ ಅಂಗಾರಾಮ್ಲ ಹಿಡಿದು ಅಮ್ಲಜನಕ ನೀಡಿತ್ತು*
*ಹೂವು ಗಿಡದ ಬೆಡಗಾಗಿತ್ತು; ಸುಗಂಧವಾಗಿ ಎಲ್ಲಕ್ಕೂ ಒದಗಿತ್ತು*
*ಹಣ್ಣು ಗಿಡದ ಸಂಸ್ಕೃತಿಯಾಗಿತ್ತು; ಪ್ರಸಾದಕ್ಕೆ ಸುಕೃತವೆಂದಿತ್ತು*
*ಅಚಲದೇವನಾಗೊಡೆಯ ಸ್ವೀಕರಣದ ದೇಸಿಯಲ್ಲಿ ಸಮರಸವಿಟ್ಟು*
*ಶಿವ-ಶರಣರ ಬಾಳಿನಂತೆ ಮಾದರಿಯಾಗಿತ್ತು*

ಎಂ. ಜಿ. ನಾಗರಾಜ್
ಎಚ್. ಎಸ್. ಸಿದ್ಧಗಂಗಪ್ಪ



*ಅಧ್ಯಕ್ಷರ ನುಡಿ*

# ಮತ್ತೊಂದು ಕುತ್ತು



'ಮಹಾಮನೆ'ಯನ್ನು ಎಷ್ಟೆಲ್ಲ ಕಷ್ಟಗಳು ಬಂದರೂ ನಿಲ್ಲಿಸದೆ ನಡೆಸಿಕೊಂಡು ಹೋಗಬೇಕೆಂದು ನಾವು ಪ್ರಯತ್ನಿಸಿದರೂ ನಮ್ಮ ಪ್ರಯತ್ನಗಳೆಲ್ಲ ಕೈಮೀರುತ್ತಿವೆ. 'ಕೃತಕ ಧೈರ್ಯ' ನಮ್ಮನ್ನು ಎಷ್ಟು ದಿನ ಕೈ ಹಿಡಿದು ನಡೆಸೀತು? ನಮ್ಮ ಸಹಜ ಧೈರ್ಯಕ್ಕೆ ಒದಗಬೇಕಾದ ಸಹಜ ಒತ್ತಾಸೆಯೂ ದೊರೆಯದಿದ್ದಾಗ ಕೃತಕ ಧೈರ್ಯದ ಕೈ ಹಿಡಿಯಲಾಗಿತ್ತು. ಆದರೆ ಅದರ ಆಯಸ್ಸು ಪರಿಮಿತ. ಹಾಗಾಗಿ ಅದೂ ನಮ್ಮ ಕೈಬಿಟ್ಟಿದೆ.

ಆದರ್ಶ-ಆಸಕ್ತಿಗಳೇ ಬೇರೆ, ಅಡ್ಡಿ-ಆತಂಕಗಳೇ ಬೇರೆ. ಹೀಗಾಗಿ ನಮ್ಮ ಆದರ್ಶ-ಆಸಕ್ತಿಗಳು ಕೇವಲ ಭಾವನಾತ್ಮಕವೆನಿಸುವಂತಾಗಿದೆ. ಅಡ್ಡಿ-ಆತಂಕಗಳದ್ದೇ ಮೇಲುಗೈಯಾಗಿದೆ.

'ಮಹಾಮನೆ'ಯ ಓದುಗರಿಗೆ ಇಂತಹ ಸಂಕಟದ ನಿವೇದನೆ ಹೊಸತೇನಲ್ಲವೆನಿಸಬಹುದು. ಆದರೆ ನೋವಿರುವವರೆಗೂ ನರಳಿಕೆಯನ್ನು ತಪ್ಪಿಸುವುದು ಹೇಗೆ? ಹುಟ್ಟಿದುದು ಒಮ್ಮೆ ಸಾಯಲೇಬೇಕು. ಅದು ಸೃಷ್ಟಿ ನಿಯಮ. ಆದರೆ ಅದು ನರಳುತ್ತ ಹಿಂಸೆಯಿಂದ ಸಾಯುವುದು ಸಹಜ ಸಾವಲ್ಲ.

ಈ ಅಂಕಣ ಇಂತಹ ಸಂಕಟ ತೋಡಿಕೊಳ್ಳುತ್ತಲೇ ಇರಬೇಕಾದ ಪರಿಸ್ಥಿತಿ ನಿಜಕ್ಕೂ ವ್ಯಥೆಯ ಸಂಗತಿ. ಬದುಕಿಗೆ ಬೇಕಾದ ಚಿಂತನೆ ನಡೆಸಬೇಕಾದ ಈ ಅಂಕಣ ಅಂತ್ಯದ ಚಿಂತೆಯನ್ನು ಆಗಾಗ ಪ್ರಸ್ತಾಪಿಸುತ್ತಿರುವುದು ಕೆಲವರಿಗೆ 'ವಿಪರ್ಯಾಸ' ಎನಿಸಲೂಬಹುದು. ಯಾರಿಗೆ ಏನೇ ಅನಿಸಿದರೂ ವಾಸ್ತವ ಸಂಗತಿಯನ್ನು ಮುಚ್ಚಿಡಲಾಗದು.

'ಮಹಾಮನೆ'ಯ ಈಗಿನ ಆಜೀವ ಸದಸ್ಯತ್ವ ಶುಲ್ಕ ೫೦೦ ರೂ. ಇದರ ನಿಶ್ಚಿತ ಠೇವಣಿಯಿಂದ ಈಗ ಬರುವ ವಾರ್ಷಿಕ ಬಡ್ಡಿ ಕೇವಲ ೩೨.೫೦ ರೂ. 'ಮಹಾಮನೆ'ಯ ಒಂದು ಪ್ರತಿಯ ಮುದ್ರಣ ವೆಚ್ಚ ೧೦ ರೂ. ಜೊತೆಗೆ ಅಂಚೆ, ಲಕೋಟೆ, ವಿಳಾಸ ಚೀಟಿ ಮತ್ತಿತರ ವೆಚ್ಚ ಸೇರಿ ಒಂದು ಪ್ರತಿಗೆ ೧೨ ರೂ.ಗಳಷ್ಟು ವೆಚ್ಚವಾಗುತ್ತದೆ. ಎಂದರೆ ವರ್ಷದ ೧೨ ಸಂಚಿಕೆಗಳಿಗೆ ೧೪೪ ರೂ. ವೆಚ್ಚ ಬರುತ್ತದೆ. ಲೇಖಕರಿಗೆ ಸಂಭಾವನೆ ಕೊಟ್ಟರೆ (ಸಹೃದಯ ಲೇಖಕರು ನಮ್ಮ ಪುಣ್ಯಕ್ಕೆ ಇದುವರೆಗೆ ಯಾರೂ ಸಂಭಾವನೆ ನಿರೀಕ್ಷಿಸಿಲ್ಲ. ಅದಕ್ಕಾಗಿ ನಾವು ಅವರಿಗೆಲ್ಲ ಎಷ್ಟು ಕೃತಜ್ಞರಾಗಿದ್ದರೂ ಸಾಲದು.) ಈ ವೆಚ್ಚ ಮತ್ತಷ್ಟು ಹೆಚ್ಚುತ್ತದೆ. ಹೀಗೆ ಚಂದಾದಾರರಿಂದ ಬರುವ ೩೨.೫೦ ರೂ.ಗಳಿಗೆ ಪ್ರತಿಯಾಗಿ ಪರಿಷತ್ತು ೧೪೪ರೂ. ವೆಚ್ಚ ಮಾಡುತ್ತಿದೆ.

ಹಾಗಾದರೆ, ಇಷ್ಟು ಕೊರತೆಯನ್ನು ಇದುವರೆಗೆ ತುಂಬಿದ್ದು ಹೇಗೆ ಎನ್ನುವ ಪ್ರಶ್ನೆ ಏಳುವುದು ಸಹಜ. ಆರಂಭದಲ್ಲಿ ಈ ಕೊರತೆ ಅನಿವಾರ್ಯವಾದರೂ, ಚಂದಾದಾರರ ಸಂಖ್ಯೆ ಹೆಚ್ಚಾದಂತೆ ಪ್ರತಿ ಸಂಚಿಕೆಯ ಮುದ್ರಣ ವೆಚ್ಚ ಕಡಮೆಯಾಗುತ್ತದೆ ಮತ್ತು ಕೆಲಮಟ್ಟಿಗಾದರೂ ಜಾಹಿರಾತು ದೊರೆಯಬಹುದು ಎಂದು ನಿರೀಕ್ಷಿಸಲಾಗಿತ್ತು. ಆದರೆ ಈ ಎರಡು ನಿರೀಕ್ಷೆಗಳೂ ಈಡೇರಲಿಲ್ಲ.

ಈಗ ಉರಿಯುವ ಗಾಯದ ಮೇಲೆ ಬರೆ ಎಳೆದಂತೆ ಅಂಚೆ ಇಲಾಖೆಯು ಮತ್ತೊಂದು ಕುತ್ತು ತಂದೊಡ್ಡಿದೆ. ಈಗ ಇಲಾಖೆ ತಿಳಿಸಿರುವ ಪ್ರಕಾರ ಒಂದು ನೂರು ಜನ ಚಂದಾದಾರರಿಗೆ ಮಾತ್ರ ಅಂಚೆ ರಿಯಾಯಿತಿ ಸೌಲಭ್ಯ ಬಳಸಿಕೊಳ್ಳಲು ಅವಕಾಶವಿದೆಯಂತೆ. ಉಳಿದ ಸಂಚಿಕೆಗಳನ್ನೆಲ್ಲ ಅವುಗಳ ತೂಕಕ್ಕೆ ತಕ್ಕಂತೆ ಹೆಚ್ಚಿನ ಅಂಚೆ ಚೀಟಿ ಹಚ್ಚಿ ಕಳುಹಿಸಬೇಕಂತೆ. ಅಷ್ಟೇ ಅಲ್ಲ, ನಾವು ಸಂಚಿಕೆ ಕಳುಹಿಸುವ ಎಲ್ಲ ಚಂದಾದಾರರ ವಿಳಾಸಗಳನ್ನು, ಸಂಬಂಧಿಸಿದ ರಸೀದಿ ದಾಖಲೆಗಳನ್ನು ಅವರಿಗೆ ಒದಗಿಸಬೇಕಂತೆ. ಇದು ಎಂತಹ ಕ್ರಮ ಎಂದು ಕೇಳಿದಾಗ "ಕೆಲವರು ಅಂಚೆ ರಿಯಾಯಿತಿಯ ದುರುಪಯೋಗ ಮಾಡಿಕೊಳ್ಳುತ್ತಿದ್ದಾರೆ. ಆ ಕಾರಣದಿಂದ ನಾವು ಬಿಗಿ ಕ್ರಮ ಅನುಸರಿಸುತ್ತಿದ್ದೇವೆ" ಎಂಬ ಉತ್ತರ ಇಲಾಖೆಯದು. ವಾಸ್ತವವಾಗಿ, ಅವರು ಹೇಳುವಂತೆ ಪತ್ರಿಕೆಯನ್ನು ಕಳುಹಿಸುವುದು, ಅವರು ಹೇಳಿದಂತೆ ಮಾಹಿತಿ ಒದಗಿಸುವುದು ಇದಕ್ಕೆಲ್ಲ ಪ್ರತ್ಯೇಕ ಸಿಬ್ಬಂದಿಯೇ ಬೇಕಾಗುತ್ತದೆ. ಇನ್ನು ಜಾಹಿರಾತು ಪುಟಗಳಿಗೂ ಅವರು ಮಿತಿ ಹೇರುತ್ತಾರೆ. ಹೀಗಾಗಿ 'ಮಹಾಮನೆ'ಯನ್ನು ಮುಂದುವರೆಸಿಕೊಂಡು ಹೋಗುವುದು ಸಾಧ್ಯವೇ ಇಲ್ಲ ಎನ್ನುವ ಪರಿಸ್ಥಿತಿ ಉಂಟಾಗಿದೆ.

ಉಳಿದ ನಿಯತಕಾಲಿಕಗಳವರು ಹೇಗೆ ಮಾಡುತ್ತಾರೆಂದರೆ ಹಣದ ಅನುಕೂಲವಿದ್ದವರು ನಡೆಸುತ್ತಾರೆ; ನಮ್ಮಂತೆ ಬಡವರಿದ್ದವರು ನಿಲ್ಲಿಸುತ್ತಾರೆ. ಹಿಂದೊಮ್ಮೆ ಇದೇ ಅಂಕಣದಲ್ಲಿ ಈ ಪ್ರಸ್ತಾಪ ಬಂದಾಗ ಬಹುತೇಕ ಓದುಗರು ಏನೇ ಕಷ್ಟ ಬಂದರೂ 'ಮಹಾಮನೆ' ನಿಲ್ಲಬಾರದೆಂದೇ ತಿಳಿಸಿದರು. ಅವರ ಸದ್ಭಾವನೆ ಸಹಜವಾದುದೇ. ಆದರೆ ಇಂದಿನ ಪರಿಸ್ಥಿತಿಯಲ್ಲಿ ಏನು ಮಾಡುವುದು?

'ಮಹಾಮನೆ' ನಿಂತರೆ ಪರಿಷತ್ತು ಮತ್ತು ಶರಣ ಸಾಹಿತ್ಯಾಭಿಮಾನಿಗಳ ಮಧ್ಯೆ ಇರುವ ಒಂದು ಸಂಬಂಧತಂತುವೇ ಮುರಿದು ಬಿದ್ದಂತಾಗುತ್ತದೆಂಬ ವ್ಯಥೆ ನನಗೂ ಇದೆ. ಆದರೆ ಉಳಿಸಿಕೊಳ್ಳುವುದು ಹೇಗೆಂಬುದೇ ಪ್ರಶ್ನೆ.

ಏನೇ ಇರಲಿ, ಪ್ರಸ್ತುತ ಚಂದಾದಾರರು 'ಮಹಾಮನೆ'ಯ ಈ ಆತಂಕ ನಿವಾರಣೆಗೆ ಕಾರ್ಯಸಾಧ್ಯ ಸಲಹೆ ನೀಡಬೇಕೆಂದು ಕೋರುತ್ತೇನೆ.

-ಗೊ.ರು.ಚ

# ನೀನೂ ಬಲ್ಲೆ, ನಾನೂ ಬಲ್ಲೆ!

ತಂದೆ ಮಲ್ಲಿಕಾರ್ಜುನ ವಹಿಸಿಕೊಟ್ಟ ರಾಜ್ಯಾಭಾರವನ್ನು ತಂದೆಯಂತೆಯೇ ವೈರಾಗ್ಯ ವಿವೇಕದಿಂದ ತೊರೆದು ವಿರಕ್ತನಾದ ಶರಣ ಸಕಲೇಶ ಮಾದರಸ. ತನ್ನನ್ನು ಅಪಾರ ಪ್ರೀತಿ ವಿಶ್ವಾಸಗಳಿಂದ, ಭಕ್ತಿ ಗೌರವಗಳಿಂದ ಕಾಣುತ್ತಿದ್ದ ಸಕಲ ಪ್ರಜೆಗಳು ಮತ್ತು ರಾಜ್ಯ ಕೋಶಾದಿ ಸಂಬಂಧಗಳನ್ನೂ ಕಳಚಿ ಏಕಾಂತಾನುಭವಕ್ಕಾಗಿ ಶ್ರೀಶೈಲದ ಕಡೆ ಪ್ರಯಾಣ ಮಾಡುತ್ತಾನೆ.

ದಾರಿಯುದ್ದಕ್ಕೂ ಪ್ರಜಾಸ್ತೋಮ ಭಕ್ತಿಭಾವದಿಂದ ಬೀಳ್ಕೊಡುತ್ತದೆ. ಮುಂದೆ ಪ್ರಯಾಣ ಮಧ್ಯದಲ್ಲಿ ಅಂಬೆ ಎಂಬ ಗ್ರಾಮ. ಅಲ್ಲಿನ ಭಕ್ತರು ಮಾದರಸನನ್ನು ಸ್ವಾಗತಿಸಿ, ತಮ್ಮಲ್ಲಿ ಪೂಜೆ - ಪ್ರಸಾದ ಸ್ವೀಕರಿಸಿ ಮುಂದೆ ಪ್ರಯಾಣ ಮಾಡಬೇಕೆಂದು ಬಿನ್ನವಿಸಿಕೊಳ್ಳುತ್ತಾರೆ. ಅವರ ಅಭಿಮಾನಕ್ಕೆ ಕಟ್ಟುಬಿದ್ದು, ಒಂದೆರಡು ದಿನ ಅಲ್ಲಿ ಇರಲು ಒಪ್ಪಿಕೊಂಡ ಮಾದರಸ. ಅಂಬೆಯ ಜನರ ಶ್ರದ್ಧಾಭಕ್ತಿಯ ಒತ್ತಾಯಗಳಿಂದ ಮತ್ತು ಅಲ್ಲಿನ ಪೂಜಾ ಸಂಭ್ರಮ ಸಡಗರಗಳಲ್ಲಿ ಅಲ್ಲೇ ಎಷ್ಟೋ ದಿನಗಳು ಉರುಳಿದವು. ಮಾದರಸನಿಗೆ ತಾನು ಇಟ್ಟುಕೊಂಡಿದ್ದ ಮುಂದಿನ ಗುರಿಯೂ ಮರೆತುಹೋಯಿತು.

ಊರಿನ ಜನ ಪರಸ್ಪರ ಮಾತನಾಡಿಕೊಂಡು ದಿನಕ್ಕೊಂದು ಮನೆಯವರಂತೆ ಸಕಲೇಶ ಮಾದರಸನ ನಿತ್ಯ ಪೂಜೆ ಪ್ರಸಾದಗಳಿಗಾಗಿ ಸೇವೆ ಸಲ್ಲಿಸಬೇಕೆಂದೂ, ಆ ಸೇವೆಗಾಗಿ ಪ್ರತಿಯೊಬ್ಬ ಸೇವಾಕರ್ತನೂ ಹನ್ನೆರಡು ಹೊನ್ನುಗಳನ್ನು ಒದಗಿಸಬೇಕೆಂದೂ ನಿರ್ಧಾರ ಕೈಗೊಂಡಿದ್ದರು.

ಸಕಲೇಶ ಮಾದರಸ ಆ ಪೂಜಾ ವೈಭವದಲ್ಲಿ ಮೈಮರೆತುಬಿಟ್ಟ. ಹೀಗಿರುವಾಗ ಒಂದು ದಿನದ ಸೇವಾ ಸರದಿಯು ಅಂಬೆಯ ಬಡ ಭಕ್ತನೊಬ್ಬನಿಗೆ ಬಂದಿತು. ಆತ ಧರ್ಮಸಂಕಟಕ್ಕೆ ಒಳಗಾದ. ಒಂದು ಕಡೆ, ಮಹಾ ವೈರಾಗ್ಯಮೂರ್ತಿಯ ಪೂಜೆಗೆ ಸೇವೆ ಸಲ್ಲಿಸುವ ಅವಕಾಶ; ಮತ್ತೊಂದು ಕಡೆ, ಆ ಸೇವೆ ಸಲ್ಲಿಸಲು ಅಗತ್ಯವಾದ ಹಣವಿಲ್ಲದ ಚಿಂತೆ.

ಚಿಂತಾಕ್ರಾಂತನಾಗಿದ್ದ ತಂದೆಯನ್ನು ಅವನ ಏಕಮಾತ್ರ ಮುದ್ದಿನ ಮಗಳು ಕಾರಣ ಕೇಳುತ್ತಾಳೆ. ತಂದೆ ವಸ್ತುಸ್ಥಿತಿಯನ್ನು ಮಗಳಿಗೆ ತಿಳಿಸುತ್ತಾನೆ. ಆಕೆ ಸಂಸ್ಕಾರ ಜೀವಿ. ತಂದೆಯ ಮಾನಸಿಕ ಹೊಯ್ದಾಟವನ್ನು ಅರ್ಥಮಾಡಿಕೊಳ್ಳುತ್ತಾಳೆ. ಕೇವಲ ಬಡತನದ ಕಾರಣದಿಂದ ಮೃಢಭಕ್ತರ ಪೂಜೆ ಸಲ್ಲಿಸಲಾಗಲಿಲ್ಲ ಎಂದು ಜನರು ಆಡಿಕೊಳ್ಳಬಾರದೆಂದು ವಿಚಾರಮಾಡಿ, ತಾನೊಂದು ನಿರ್ಧಾರಕ್ಕೆ ಬರುತ್ತಾಳೆ. ತನ್ನನ್ನು ಊರಿನ ಉಳ್ಳವರ ಮನೆಯಲ್ಲಿ ಅಡವಿಟ್ಟು ಹಣತಂದು ಸರದಿಯ ಸೇವೆ ಸಲ್ಲಿಸಬೇಕೆಂದು ತಂದೆಗೆ ತಿಳಿಸುತ್ತಾಳೆ.

ಹೆತ್ತ ತಂದೆಗೆ ಈ ಸಲಹೆ ನುಂಗಲಾರದ ತುತ್ತಾಗುತ್ತದೆ. ಹೆತ್ತ ಮಗಳನ್ನೇ ಒತ್ತೆ ಇಡುವುದು ಹೇಗೆ? ಸಹಜವಾಗಿ ತಂದೆ ದುಃಖಿಸುತ್ತಾನೆ. ಆಗ ಮಗಳು, ಆ ಬಗೆಗೆ ಚಿಂತಿಸಬಾರದೆಂದೂ, ಪೂಜಾಸೇವೆಯ ಕರ್ತವ್ಯ ಮಾಡಬೇಕೆಂದೂ ತಂದೆಗೆ ಧೈರ್ಯ ಹೇಳುತ್ತಾಳೆ. ಆ ಬಡ ತಂದೆ ಮನಸ್ಸಿಲ್ಲದ ಮನಸ್ಸಿನಲ್ಲಿ ಮಗಳ ಮಾತಿನಂತೆ ನಡೆದುಕೊಳ್ಳುತ್ತಾನೆ.

ಅಂದು ಸಂಜೆ ಆ ಬಡಭಕ್ತನ ಸೇವೆ. ಸಕಲೇಶ ಮಾದರಸನ ಶಿವಪೂಜೆ ಅತ್ಯಂತ ವೈಭವದಿಂದ ನಡೆಯುತ್ತದೆ. ಮಾದರಸ ಅಂಗೈಯಲ್ಲಿದ್ದ ಲಿಂಗಕ್ಕೆ ಮಂಗಳಾರತಿ ಬೆಳಗಿದಾಗ ಲಿಂಗದಲ್ಲಿ ಪ್ರತಿಫಲಿಸಿದ ಬೆಳಕಿನಲ್ಲಿ ಬಂಧನಕ್ಕೊಳಗಾದ ಓರ್ವ ಸುಂದರ ಯುವತಿಯ ದೃಶ್ಯ ಕಂಡು ಬಂದಂತಾಗುತ್ತದೆ. ಮಾದರಸನಿಗ ಮಹದಾಶ್ಚರ್ಯವಾಗುತ್ತದೆ.

ಪೂಜೆ ಮುಗಿದ ನಂತರ ಮಾದರಸ ತನಗಾದ ಅನುಭವವನ್ನು ಬಂದ ಭಕ್ತರೆದುರಿಗೆ ತಿಳಿಸಿದಾಗ, ಅಂದು ಸೇವೆ ಸಲ್ಲಿಸಿದ ಬಡಭಕ್ತ ನಿಜ ಸಂಗತಿಯನ್ನು ಅರಿಕೆ ಮಾಡಿಕೊಂಡು ಕ್ಷಮೆ ಕೋರುತ್ತಾನೆ. ಮಾದರಸನ ಕರುಳು ಕರಗಿ, ಕೂಡಲೇ ಆ ಅಡವಿಟ್ಟ ಬಡಭಕ್ತನ ಮಗಳನ್ನು ಬಂಧನದಿಂದ ಬಿಡಿಸಿಕೊಂಡು ಬರಲು ವ್ಯವಸ್ಥೆ ಮಾಡುತ್ತಾನೆ. ಆದರೆ ಈ ಪ್ರಸಂಗ ಮಾದರಸನ ಮೇಲೆ ಅಗಾಧ ಮತ್ತು ಅನಿರ್ವಚನೀಯ ಪರಿಣಾಮವುಂಟು ಮಾಡುತ್ತದೆ.

ಪೂಜಾ ವೈಭವಕ್ಕೆ ಸಿಕ್ಕಿ ಗುರಿಯನ್ನು ಮರೆತ ತನ್ನ ಬಗೆಗೆ ತನಗೇ ನಾಚಿಕೆ ಎನಿಸುತ್ತದೆ. ತಕ್ಷಣವೇ ದೃಢಸಂಕಲ್ಪ ಮಾಡುತ್ತಾನೆ. ಅಂದೇ ಅಂಬೆ ಗ್ರಾಮ ಬಿಟ್ಟು, ತನ್ನೊಡನಿದ್ದ ಸಕಲ ಸೇವಕರನ್ನು ಬಿಟ್ಟು ಏಕಾಂಗಿಯಾಗಿ ಶ್ರೀಶೈಲಕ್ಕೆ ಹೊರಟುಬಿಡುತ್ತಾನೆ.

ಶ್ರೀಶೈಲದಲ್ಲಿ ಏಕಾಂತ ಅನುಷ್ಠಾನದಲ್ಲಿದ್ದ ತಂದೆ ಮಲ್ಲಿಕಾರ್ಜುನನೇ ಅವನಿಗೆ ಗುರುವಾಗುತ್ತಾನೆ. ಅಲ್ಲಿ ಕೆಲಕಾಲ ಕಳೆದು ಗುರುವಿನ ಸೂಚನೆಯಂತೆ ಮುಂದೆ ಕಲ್ಯಾಣ ಸೇರಿ ಅಲ್ಲಿನ ಶರಣ ಸಮೂಹದ ಒಂದು ಕಿರಣವಾಗುತ್ತಾನೆ.

ರಾಜವೈಭವವನ್ನು ತೊರೆದು ಪೂಜಾವೈಭವಕ್ಕೆ ಸಿಲುಕಿದ ಸಕಲೇಶ ಮಾದರಸನ ಈ ಪ್ರಸಂಗ ನಿಜ ವೈರಾಗ್ಯದ ಸ್ವರೂಪವೇನು ಎನ್ನುವುದನ್ನು ನಿದರ್ಶನಗೊಳಿಸುತ್ತದೆ. ತನಗೆ ದೇವರು ಮಾಡಿದ ಸಂಸಾರದ ಬಳಲಿಕೆ. ದೇವರಿಗೆ ತನ್ನನ್ನು ಕಾಡುವ ಬಳಲಿಕೆ. ಹೀಗಾಗಿ ತಾನೂ-ದೇವರೂ, ಇಬ್ಬರೂ ಒಂದೇ - ಎಂಬುದನ್ನು 'ನೀನೂ ಬಲ್ಲೆ, ನಾನು ಬಲ್ಲೆ' ಎಂದು ದೇವರಿಗೇ ಹೇಳುತ್ತಾನೆ ಸಕಲೇಶ ಮಾದರಸ!

-ಗೊ.ರು.ಚ.







# ಆತಂಕದ ಸಮಾಜದ ನಿರೀಕ್ಷೆಗಳು ರಾಜ್ಯಮಟ್ಟದ ಯಶಸ್ವಿ ಚಿಂತನ ಸಂಕಿರಣ

ಅಖಿಲ ಭಾರತ ಸಾಹಿತ್ಯ ಪರಿಷತ್ತು ಹೆಚ್.ಎಂ. ಮಲ್ಲಿಕಾರ್ಜುನಪ್ಪ ಸಮಾಜ ಸೇವಾ ಪ್ರತಿಷ್ಠಾನದ ಸಹಯೋಗದೊಂದಿಗೆ ದಿನಾಂಕ ೮-೫-೨೦೦೫ರಂದು ಶಿವಮೊಗ್ಗದ ಕುವೆಂಪು ರಂಗಮಂದಿರದಲ್ಲಿ ಏರ್ಪಡಿಸಿದ್ದ 'ಆತಂಕದ ಸಮಾಜದ ನಿರೀಕ್ಷೆಗಳು' ಎಂಬ ವಿಷಯ ಕುರಿತ ರಾಜ್ಯಮಟ್ಟದ ಚಿಂತನ ಸಂಕಿರಣ ಅತ್ಯಂತ ಯಶಸ್ವಿಯಾಗಿ ನಡೆಯಿತು.

ಚಿಂತನ ಸಂಕಿರಣವನ್ನು ಉದ್ಘಾಟಿಸಿದ ಕೇಂದ್ರ ಯೋಜನಾ ಖಾತೆಯ ರಾಜ್ಯಸಚಿವರಾದ ಶ್ರೀ ಎಂ.ವಿ. ರಾಜಶೇಖರನ್ ಅವರು "ದೇಶದ ರಾಜಕೀಯ ಕ್ಷೇತ್ರದಲ್ಲಿ ಉಂಟಾಗಿರುವ ನೈತಿಕ ಪತನ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯ ಮೇಲೆ ಬೀರಿರುವ ದುಷ್ಪರಿಣಾಮದ ಬಗೆಗೆ ವಿಷಾದ ವ್ಯಕ್ತಪಡಿಸಿ, ಹನ್ನೆರಡನೆಯ ಶತಮಾನದ ಶರಣರ ವಿಚಾರಧಾರೆಯ ಆಧಾರದ ಮೇಲೆ ಸಮಾಜ ನಿರ್ಮಾಣದ ಕಾರ್ಯ ನಡೆಯಬೇಕಾಗಿದೆ" ಎಂದು ತಿಳಿಸಿ, "ಪ್ರಸ್ತುತ ಸನ್ನಿವೇಶಕ್ಕೆ ಸೂಕ್ತವಾಗಿರುವ ಇಂತಹ ಚಿಂತನ ಸಂಕಿರಣವನ್ನು ವ್ಯವಸ್ಥೆಗೊಳಿಸಿರುವ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತನ್ನು ಅಭಿನಂದಿಸಬೇಕು" ಎಂದರು.



ಶ್ರೀ ಎಂ.ವಿ. ರಾಜಶೇಖರನ್ ಅವರಿಂದ ಉದ್ಘಾಟನೆ

ಸಂಕಿರಣದ ಉದ್ಘಾಟನಾ ಸಮಾವೇಶದ ಅಧ್ಯಕ್ಷತೆಯನ್ನು ವಹಿಸಿದ್ದ ನಿವೃತ್ತ ಮುಖ್ಯ ನ್ಯಾಯಾಧೀಶರಾದ ನ್ಯಾಯಮೂರ್ತಿ ಡಾ. ವಿ.ಎಸ್. ಮಳಿಮಠ ಅವರು "ಸ್ವತಂತ್ರ ಭಾರತದಲ್ಲಿ ಅತ್ಯಂತ ಅಗತ್ಯವಾಗಿದ್ದ ಕರ್ತವ್ಯನಿಷ್ಠ ಸಂಸ್ಕೃತಿಗೆ ಬದಲಾಗಿ ಹಕ್ಕುನಿಷ್ಠ ಸಂಸ್ಕೃತಿ ಬೆಳೆದಿರುವುದು ರಾಷ್ಟ್ರದ ಸಮಗ್ರ ಪ್ರಗತಿಗೆ ಆತಂಕಕಾರಿಯಾಗಿದೆ. ವಿಚಾರಕ್ಕೆ ತಕ್ಕ ಆಚರಣೆಯಿಲ್ಲದೆ ನಮ್ಮ ಸಾರ್ವಜನಿಕ ಬದುಕು ದುರ್ಭರವಾಗುತ್ತಿದೆ. ಈ ಬಗೆಗೆ ದೇಶಾದ್ಯಂತ ಗಂಭೀರ ಚಿಂತನೆ ನಡೆಯಬೇಕಾಗಿದೆ" ಎಂದರು.

ಸಮಾವೇಶದ ಸಾನ್ನಿಧ್ಯ ವಹಿಸಿದ್ದ ಪರಿಷತ್ತಿನ ಗೌರವಾಧ್ಯಕ್ಷರಾದ ಪೂಜ್ಯ ಡಾ. ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು ತಮ್ಮ ಆಶೀರ್ವಚನದಲ್ಲಿ 'ಆತಂಕದ ಸಮಾಜದ ನಿರೀಕ್ಷೆಗಳು' ಎನ್ನುವುದಕ್ಕಿಂತ 'ಭ್ರಷ್ಟ ಸಮಾಜದ ಆತ್ಮನಿರೀಕ್ಷೆ' ಎಂದಿರಬೇಕಾಗಿತ್ತು. ಈಗ ನೈತಿಕ ಮಟ್ಟದ ಅಧಃಪತನ ಸಾರ್ವತ್ರಿಕವಾಗಿದೆ. ಜನರು ಸಹಜ ಜೀವನ ಮೌಲ್ಯಗಳನ್ನು ಪಾಲಿಸದಿದ್ದರೆ ಭರಿಸಲಾಗದ ಬೆಲೆ ತೆರಬೇಕಾಗುತ್ತದೆ" ಎಂದು ಎಚ್ಚರ ನೀಡಿದರು.

ಮುಖ್ಯ ಅತಿಥಿಗಳಾಗಿದ್ದ ಶಾಸಕ ಶ್ರೀ ಕುಮಾರ ಬಂಗಾರಪ್ಪ ಅವರು "ಇಂತಹ ಚಿಂತನಗಳಿಂದ ಯುವಜನಾಂಗಕ್ಕೆ ಉತ್ತಮ ಮಾರ್ಗದರ್ಶನ ದೊರೆಯುವುದು" ಎಂದರು. ಆರಂಭದಲ್ಲಿ ಶ್ರೀ ಗೊ.ರು.ಚ. ಅವರು ಸ್ವಾಗತ ಬಯಸಿ ಪ್ರಾಸ್ತಾವಿಕ ನುಡಿಗಳನ್ನಾಡಿದರು. ಕೊನೆಯಲ್ಲಿ ಮಾಜಿ ಶಾಸಕ ಶ್ರೀ ಹೆಚ್.ಎಂ. ಚಂದ್ರಶೇಖರಪ್ಪ ಅವರು ವಂದನೆ ಸಲ್ಲಿಸಿದರು.

ಮೊದಲ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದ ಹಿರಿಯ ಪರಿಸರ ತಜ್ಞರಾದ ಡಾ. ಎ.ಎನ್. ಯಲ್ಲಪ್ಪರೆಡ್ಡಿ ಅವರು, ಪ್ರಕೃತಿ ಸಂಪತ್ತಿನ ನಾಶದಿಂದ ಆಗುವ ಮತ್ತು ಆಗುತ್ತಿರುವ ಅನಾಹುತಗಳನ್ನು ಅಂಕಿ-ಅಂಶಗಳ ಸಹಿತ ವಿವರಿಸಿದರು. ಮೈಸೂರು ವಿಶ್ವವಿದ್ಯಾಲಯದ ನಿವೃತ್ತ ಅರ್ಥಶಾಸ್ತ್ರ ಪ್ರಾಧ್ಯಾಪಕರಾದ ಡಾ. ಸಿ.ಕೆ. ರೇಣುಕಾರ್ಯ ಅವರು ಆರ್ಥಿಕ ನಿರೀಕ್ಷೆಗಳನ್ನು ಕುರಿತ ಅಧ್ಯಯನಪೂರ್ಣ ಪ್ರಬಂಧ ಮಂಡಿಸಿದರು.



ಉದ್ಘಾಟನಾ ಸಮಾವೇಶದಲ್ಲಿ ಪೂಜ್ಯ ಡಾ. ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳಿಂದ ಆಶೀರ್ವಚನ

ಮಧ್ಯಾಹ್ನ ನಡೆದ ಎರಡನೆಯ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದ ನ್ಯಾಯಮೂರ್ತಿ ಶ್ರೀ ಎ.ಜೆ. ಸದಾಶಿವ ಅವರು 'ನ್ಯಾಯಿಕ ನಿರೀಕ್ಷೆಗಳ'ನ್ನು ಕುರಿತು ಮಾತನಾಡುತ್ತ, 'ನಮ್ಮ ನ್ಯಾಯ ವ್ಯವಸ್ಥೆ ಜನ ಸಮುದಾಯದ ವಿಶ್ವಾಸವನ್ನು ಕಳೆದುಕೊಳ್ಳದಂತೆ ನೋಡಿಕೊಳ್ಳಬೇಕು" ಎಂದರು. ಈ ಗೋಷ್ಠಿಯಲ್ಲಿ ಕರ್ನಾಟಕ




ನೆರೆದಿದ್ದ ಶ್ರೋತೃ ಸಮೂಹ

ವಿಶ್ವವಿದ್ಯಾಲಯದ ನಿವೃತ್ತ ತತ್ವಶಾಸ್ತ್ರ ಪ್ರಾಧ್ಯಾಪಕರಾದ ಡಾ. ಎನ್.ಜಿ. ಮಹಾದೇವಪ್ಪ ಮತ್ತು ಶಿಕ್ಷಣ ಶಾಸ್ತ್ರ ಪ್ರಾಧ್ಯಾಪಕರಾದ ಡಾ. ಶ್ರೀಪಾದ ಬೋಳಶೆಟ್ಟಿ ಅವರು ಅನುಕ್ರಮವಾಗಿ 'ಧಾರ್ಮಿಕ ನಿರೀಕ್ಷೆಗಳು' ಮತ್ತು 'ಶೈಕ್ಷಣಿಕ ನಿರೀಕ್ಷೆಗಳು' ಕುರಿತಂತೆ ವಿದ್ವತ್ಪೂರ್ಣ ವಿಚಾರಗಳನ್ನು ಮಂಡಿಸಿದರು.

ಸಂಕಿರಣದ ಸಮಾರೋಪ ಸಮಾವೇಶ ಶಿವಮೊಗ್ಗ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಗೌರವಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳ ಸಾನ್ನಿಧ್ಯದಲ್ಲಿ ನಡೆಯಿತು. ಲೋಕ ಶಿಕ್ಷಣ ಟ್ರಸ್ಟ್ ಅಧ್ಯಕ್ಷರಾದ ಶ್ರೀ ಹಾರನಹಳ್ಳಿ ರಾಮಸ್ವಾಮಿ ಅವರು ಅಧ್ಯಕ್ಷತೆ ವಹಿಸಿದ್ದರು. ಕುವೆಂಪು ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಕೆ. ಚಿದಾನಂದಗೌಡರು ಸಮಾರೋಪ ಭಾಷಣ ಮಾಡಿದರು. ಕರ್ನಾಟಕ ವಿಧಾನಪರಿಷತ್ತಿನ ವಿರೋಧ ಪಕ್ಷದ ನಾಯಕರಾದ ಶ್ರೀ ಬಿ.ಎಸ್. ಯಡಿಯೂರಪ್ಪ ಅವರು ಮುಖ್ಯ ಅತಿಥಿಗಳಾಗಿದ್ದರು.

ಸಮಾರೋಪ ಸಮಾವೇಶದಲ್ಲಿ ಮಾತನಾಡಿದ ಸರ್ವರೂ ದೇಶದ ಎಲ್ಲ ಕ್ಷೇತ್ರಗಳಲ್ಲೂ ಕಂಡುಬರುತ್ತಿರುವ ಅವ್ಯವಸ್ಥೆಯ ಬಗೆಗೆ ಕಳವಳ ವ್ಯಕ್ತಪಡಿಸಿದರಲ್ಲದೆ ಗೌರವಯುತ ಮತ್ತು ನೆಮ್ಮದಿಯ ಸಮಾಜ ನಿರ್ಮಾಣಕ್ಕೆ ಸವಾಲಾಗಿರುವ ಆತಂಕಗಳ ನಿವಾರಣೆಗೆ ಸಮಸ್ತರೂ ಸಹಕರಿಸಬೇಕೆಂದು ಕರೆ ನೀಡಿದರು. ಆರಂಭದಲ್ಲಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಕ.ಮ.ಶಿ. ಚಂದ್ರಶೇಖರಯ್ಯ ಅವರು ಸ್ವಾಗತ ಬಯಸಿದರು. ಹೆಚ್.ಎಂ. ಮಲ್ಲಿಕಾರ್ಜುನಪ್ಪ ಸಮಾಜ ಸೇವಾ ಪ್ರತಿಷ್ಠಾನದ ಪತಿಯಿಂದ ಶ್ರೀ ಹೆಚ್.ಎಂ. ಮಧು ಅವರು ವಂದನೆ ಸಲ್ಲಿಸಿದರು.

ಇಡೀ ದಿನ ನಡೆದ ಚಿಂತನ ಸಂಕಿರಣಕ್ಕೆ ಶಿವಮೊಗ್ಗ ನಗರವಷ್ಟೆ ಅಲ್ಲದೆ ಜಿಲ್ಲೆಯ ಎಲ್ಲ ತಾಲೂಕುಗಳಿಂದಲೂ ಗಣನೀಯ ಸಂಖ್ಯೆಯಲ್ಲಿ ಆಸಕ್ತರು ಆಗಮಿಸಿದ್ದರು. ಸಂಕಿರಣ ವ್ಯವಸ್ಥೆಯಲ್ಲಿ ಹೆಚ್.ಎಂ. ಮಲ್ಲಿಕಾರ್ಜುನಪ್ಪ ಸಮಾಜಸೇವಾ ಪ್ರತಿಷ್ಠಾನದ ಕಾರ್ಯದರ್ಶಿ ಶ್ರೀ ಹೆಚ್.ಎಂ. ಮಲ್ಲಪ್ಪ, ಶಿವಮೊಗ್ಗ ತಾಲೂಕ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಹೆಚ್.ಎನ್. ರುದ್ರಮುನಿ, ಡಾ. ಹೆಚ್.ಎಂ. ಮಲ್ಲಿಕಾರ್ಜುನ, ಶ್ರೀ ಹೆಚ್.ಎಂ. ಮಧು ಮತ್ತು ಅವರ ಜೊತೆಯವರು ಸಲ್ಲಿಸಿದ ಸೇವೆ ಸ್ಮರಣೀಯ.

ವರದಿ : ಕ.ಮ.ಶಿ. ಚಂದ್ರಶೇಖರಯ್ಯ

### ರಾಯಚೂರು ಜಿಲ್ಲಾ ಪ್ರಥಮ ಶರಣ ಸಾಹಿತ್ಯ ಸಮ್ಮೇಳನ

ಅಖಿಲ ಭಾರತ ೬ನೆಯ ಶರಣ ಸಾಹಿತ್ಯ ಸಮ್ಮೇಳನವನ್ನು ಅತ್ಯಂತ ಉತ್ಸಾಹ ಮತ್ತು ಸಡಗರಗಳಿಂದ ನಡೆಸಿದ ರಾಯಚೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಇದೇ ೨೦೦೫ರ ಜೂನ್ ೧೧ ಮತ್ತು ೧೨ರಂದು ಜಿಲ್ಲೆಯ ಮಟಮಾರಿ ಗ್ರಾಮದಲ್ಲಿ ಜಿಲ್ಲಾ ಮಟ್ಟದ ಪ್ರಥಮ ಶರಣ ಸಾಹಿತ್ಯ ಸಮ್ಮೇಳನ ಏರ್ಪಡಿಸಿದೆ.

ಸಮ್ಮೇಳನದಲ್ಲಿ ಹಿರಿಯ ಶಿವಾನುಭಾವಿಗಳಾದ ಬೆಂಗಳೂರಿನ ಬೇಲಿಮಠದ ಪೂಜ್ಯ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳು ಮತ್ತು ಆನಂದಪುರಂನ ಶ್ರೀ ಮುರುಘಾಮಠದ ಪೂಜ್ಯ ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳಲ್ಲದೆ ಸ್ಥಳೀಯ ಧರ್ಮಗುರುಗಳು ಪಾಲುಗೊಳ್ಳಲಿದ್ದಾರೆ.

ಸಮ್ಮೇಳನದ ಅಂಗವಾಗಿ ನಡೆಯುವ ಚಿಂತನಗೋಷ್ಠಿಗಳಲ್ಲಿ ಜಿಲ್ಲೆಯ ಶರಣ ಸಾಹಿತ್ಯ ಕ್ಷೇತ್ರದ ಪ್ರಮುಖ ವಿದ್ವಾಂಸರು ಭಾಗವಹಿಸುತ್ತಿದ್ದಾರೆ. ಸ್ಥಳೀಯ ಕಲಾವಿದರಿಂದ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುತ್ತವೆ. ಕಲ್ಯಾಣ ನಾಡಿನಲ್ಲಿ ನಡೆಯುತ್ತಿರುವ ಈ ಜಿಲ್ಲಾ ಮಟ್ಟದ ಸಮ್ಮೇಳನಕ್ಕೆ ಜಿಲ್ಲೆಯ ಎಲ್ಲ ತಾಲೂಕುಗಳಿಂದ ಮಾತ್ರವಲ್ಲದೆ ಹೊರಜಿಲ್ಲೆಗಳಿಂದಲೂ ಶರಣ ಸಾಹಿತ್ಯಾಭಿಮಾನಿಗಳು ಹೆಚ್ಚಿನ ಸಂಖ್ಯೆಯಲ್ಲಿ ಬರಬೇಕೆಂಬುದು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎಂ. ನಾಗಪ್ಪನವರು ಮತ್ತು ಮಟಮಾರಿ ಗ್ರಾಮಸ್ಥರ ಅಪೇಕ್ಷೆಯಾಗಿದೆ. ಸಮ್ಮೇಳನವನ್ನು ಅರ್ಥಪೂರ್ಣವಾಗಿ ನಡೆಸಲು ಎಲ್ಲ ಸಿದ್ಧತೆಗಳು ಆಗಿವೆ.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಗ್ರಂಥಗಳನ್ನು ಸಮ್ಮೇಳನ ಸಂದರ್ಭದಲ್ಲಿ ಶೇಕಡ ೫೦ರ ರಿಯಾಯಿತಿ ದರದಲ್ಲಿ ಮಾರಾಟದ ವ್ಯವಸ್ಥೆ ಮಾಡಲಾಗಿದೆ.

-ವರದಿ





# ಕರ್ನಾಟಕದ ಲಿಂಗಾಯತರು

-ಬರ್ಗಿಟ್ ರೋಡ್ಸ್ ಮತ್ತು ಸ್ಟೆನ್ ರೋಡ್ಸ್

(ಕಳೆದ ಸಂಚಿಕೆಯಿಂದ)

### ಶೈಕ್ಷಣಿಕ ಪುನರುಜ್ಜೀವನ

ಇಪ್ಪತ್ತನೆಯ ಶತಮಾನ ವಿಶೇಷವಾಗಿ ಶಿಕ್ಷಣ ಕ್ಷೇತ್ರದಲ್ಲಿ ಲಿಂಗಾಯತ ಪುನರುತ್ಥಾನಕ್ಕೆ ಸ್ಪಷ್ಟ ರುಜುವಾತು ನೀಡುತ್ತದೆ. ಲಿಂಗಾಯತ ಸಮಾಜ ಜೀವನದಲ್ಲಿ ಯಾವಾಗಲೂ ಬೋಧನೆಗೆ ಪ್ರಾಮುಖ್ಯತೆ ಇರುವುದು ಕಂಡುಬರುತ್ತದೆ. ಲಿಂಗಾಯತ ಧರ್ಮದ ಮೂಲ ಸೂತ್ರಗಳನ್ನು ತಿಳಿಸುವ ಉದ್ದೇಶದ ವಚನಗಳನ್ನು-ಅವು ಬಸವಣ್ಣನ ಅಥವಾ ನಂತರದ ವಚನಕಾರರು ಅಥವಾ ಹೊಸದಾಗಿ ರಚಿತವಾದವುಗಳಿರಬಹುದು-ಪಠಿಸಲಾಗುತ್ತಿತ್ತು ಅಥವಾ ಹಾಡಲಾಗುತ್ತಿತ್ತು. ಬಹುಮಟ್ಟಿಗೆ ವಚನಪಠನದ ನಂತರ ಪ್ರವಚನ ನಡೆಯುತ್ತಿತ್ತು. ಬಸವಣ್ಣನ ಸಂದೇಶದ ಮೂಲಕ ಲಿಂಗಾಯತರಿಗೆ ಅವರ ಸ್ವಂತ ಜೀವನದ ಮತ್ತು ಆಚಾರ ಪದ್ಧತಿಯ ಮಹತ್ವವನ್ನು ಒತ್ತಿ ಹೇಳುವುದು ಅವರ ಗುರಿಯಾಗಿತ್ತು. ಹಾಗೆ ಅಂದಿನ ಸಭೆಗಳು ಅನೌಪಚಾರಿಕವಾಗಿ ಸಮೂಹ ಶಿಕ್ಷಣ ನೀಡುತ್ತಿದ್ದವು.

ಏನೇ ಇದ್ದರೂ, ನಂತರದ ಶತಮಾನಗಳಲ್ಲಿ ಸಮೂಹದ ಬಗೆಗೆ ಗಮನ ಕೊಟ್ಟಿರುವುದಿಲ್ಲ. ಶಿಕ್ಷಣಕ್ಕೆ ಸಂಬಂಧಿಸಿದಂತೆ ೧೨ನೆಯ ಶತಮಾನದ ಆದರ್ಶಗಳನ್ನು ಮರೆತಿರುವಂತೆ ಕಾಣುತ್ತದೆ. ಈಗಿನ ಕಾಲದಲ್ಲಿ ರಚನೆಗೊಳ್ಳುತ್ತಿರುವ ವಚನಗಳ ಉದ್ದೇಶ ಯುವ ಸನ್ಯಾಸಿಗಳಿಗೆ ಬೋಧಿಸುವುದಾಗಿದೆಯೇ ವಿನಃ ಜನಸಾಮಾನ್ಯರಿಗೆ ಮುಟ್ಟಿಸುವುದಾಗಿಲ್ಲ. "ದೇವರ ಪ್ರತಿನಿಧಿ ಎಂಬ ನಿವಾಸರಹಿತ ಜಂಗಮದ ಚಲನಾತ್ಮಕ ಪರಿಕಲ್ಪನೆಯು ಸಿಂಹಾಸನಸ್ಥ ದಿವ್ಯ ಗುರುವಿನ ಸ್ಥಗಿತರೂಪಕ್ಕೆ ಬದಲಾವಣೆಯಾಗಿದೆ." ಆಧ್ಯಾತ್ಮಿಕ ವಚನಗಳಲ್ಲಿ ಸಾಮಾನ್ಯ ಗೃಹಸ್ಥರು ಪಾಲುಗೊಳ್ಳಲು ಅವಕಾಶ ನೀಡಿಲ್ಲ.

> ನಮ್ಮಲ್ಲಿರುವ ಸತ್ಯ ಮೌನವಾಗಿದೆ; ಗಳಿಸಿದ್ದು ಮಾತನಾಡುತ್ತಿದೆ.
>
> -ಖಲೀಲ್ ಗಿಬ್ರಾನ್

ಹಿಂದಿನ ಕಾಲದಲ್ಲಿ ವೀರಶೈವ ಜೀವನದ ಅವಿಭಾಜ್ಯ ಅಂಗವಾಗಿದ್ದ ಶಿಕ್ಷಣದ ರೂಪ ೧೯ನೆಯ ಶತಮಾನದ ಈಚೆಗಷ್ಟೇ ಪುನರುತ್ಥಾನವಾಗಿರುವಂತೆ ಕಾಣುತ್ತದೆ. ಬಸವಣ್ಣ ಮತ್ತು ಅವನ ಸಮಕಾಲೀನರ ಜೀವನವನ್ನು ಕುರಿತ ಸಾಂಪ್ರದಾಯಿಕ ಪ್ರವಚನಗಳನ್ನು ಮಾಡುವ, ವಚನ ಪಠನ ಅಥವಾ ಗಾಯನ ನಡೆಸುವ ಮತ್ತು ವಚನಾರ್ಥವನ್ನು ವ್ಯಾಖ್ಯಾನಿಸುವ ಕಾರ್ಯಕ್ರಮಗಳು ಮತ್ತೆ ಜನಪ್ರಿಯ ಸಮಾವೇಶದ ಭಾಗಗಳಾಗಿವೆ. ಇದು ವಿಶೇಷವಾಗಿ ಲಿಂಗಾಯಿತರು ಹೆಚ್ಚಾಗಿರುವ ಪ್ರದೇಶಗಳಲ್ಲಿ ಒಂದು ರೀತಿಯ ಅನೌಪಚಾರಿಕ ಶಿಕ್ಷಣವೇ ಆಗಿದೆ ಎನ್ನಬಹುದು. ೧೯ನೆಯ ಶತಮಾನದ ಆರಂಭದಲ್ಲಿ ಗೃಹಸ್ಥ ಜನ ಶಿಕ್ಷಣದ ಪುನರುಜ್ಜೀವನಕ್ಕೆ ತೊಡಗಿದರು. ಲಿಂಗಾಯತರು ಪ್ರಬಲವಾಗಿರುವ ಧಾರವಾಡ ಮತ್ತು ಬೆಳಗಾವಿ ಪ್ರದೇಶಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಪುಣೆ ಅಥವಾ ಮುಂಬೈ ಅಥವಾ ಇಂಗ್ಲೆಂಡಿನಲ್ಲೂ ಕೂಡ ಕಾಲೇಜುಗಳಲ್ಲಿ ಕಲಿಯುವುದಕ್ಕಾಗಿ ಲಿಂಗಾಯತ ಸಮಾಜದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನಗಳ ಮೂಲಕ ಉತ್ತೇಜನ ನೀಡುವುದು ಈ ಶಿಕ್ಷಣ ಸಂಸ್ಥೆಗಳ ಉದ್ದೇಶವಾಗಿತ್ತು. ೧೯೧೬ರಲ್ಲಿ ಬೆಳಗಾವಿಯಲ್ಲಿ ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆ (ಕೆ.ಎಲ್.ಇ.ಎಸ್)ಯನ್ನು ಆರಂಭಿಸಲಾಯಿತು. ೧೯೦೫ರಲ್ಲೇ ಮೈಸೂರು ಲಿಂಗಾಯತ ಶಿಕ್ಷಣ ವಿದ್ಯಾ ಸಂಸ್ಥೆಯನ್ನು ರಚಿಸಲಾಗಿತ್ತು. ಈಶ್ವರನ್ ಪ್ರಕಾರ, ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆಯ ಸ್ಥಾಪಕರು ಒಂದು ಗುಡಿಸಿಲಿನಲ್ಲಿ ಆಂಗ್ಲೋ-ವರ್ನಾಕ್ಯುಲರ್ ಶಾಲೆಯನ್ನು ಆರಂಭಿಸಿದ 'ಐದು ಜನ ವಿನಮ್ರ ಶಿಕ್ಷಕರು' ಆ ಗುಡಿಸಲಿಗೆ ಅವರೇ ಬಾಡಿಗೆಯನ್ನೂ ಕೊಡಬೇಕಾಗಿತ್ತು.

ಗೃಹಸ್ಥರ ಈ ಉಪಕ್ರಮದಿಂದ ಉತ್ತೇಜಿತವಾಗಿ ಸಂಸ್ಕೃತ ಕಲಿಕೆಗಾಗಿ ಕೆಲವು ಮಠಗಳು ಶಾಲಾ ಕಾಲೇಜುಗಳು, ಪಾಠಶಾಲೆಗಳನ್ನು ತೆರೆಯಲು ಆರಂಭಿಸಿದವು. ಈ ಶಾಲೆಗಳಿಗೆ ಹೊಂದಿಕೊಂಡಂತೆ ವಿದ್ಯಾರ್ಥಿ ನಿಲಯಗಳು ತೆರೆಯಲ್ಪಟ್ಟವು. ಬಹುತೇಕ ದಕ್ಷಿಣ ಭಾರತದಲ್ಲಿ ಕ್ರಿಯಾಶೀಲವಾಗಿದ್ದ ಈ ಸಂಸ್ಥೆಗಳು ಬ್ರಾಹ್ಮಣೇತರ ಚಳವಳಿಯ ಭಾಗಗಳಾದವು. ಸಂಸ್ಕೃತ ಭಾಷೆಯ ಅಧ್ಯಯನ ಬ್ರಾಹ್ಮಣರ ಗುತ್ತಿಗೆಯಾಗಲು ಬಿಡಬಾರದೆಂಬುದು ಅವುಗಳ ಆಶಯವಾಗಿತ್ತು. ಶೌಟನ್ ಸಂಕ್ಷಿಪ್ತವಾಗಿ ಹೀಗೆ ಹೇಳುತ್ತಾರೆ: "ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಆರಂಭವಾದ ಈ ಶಿಕ್ಷಣದ ಪುನರುಜ್ಜೀವನ ಕೇವಲ ಮೂರು ಅಥವಾ ನಾಲ್ಕು ದಶಕಗಳಲ್ಲಿ ಲಿಂಗಾಯತ ಸಮಾಜಕ್ಕೆ ಒಂದು ಹೊಸ ರೂಪವನ್ನೇ ನೀಡಿತು".

ಮೇಲೆ ಹೇಳಿದ ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆಯಿಂದ ಬಂದ ಈಶ್ವರನ್ ಅವರು, ಅದು "ಆದರ್ಶ ಮತ್ತು ಸಂಸ್ಥೆಗಳ ಪುನರುತ್ಥಾನದ ಹಂತ"ವೆಂದು ಬರೆಯುತ್ತಾರೆ. ೬೩ ವರ್ಷಗಳ ಅವಧಿಯಲ್ಲಿ ಸಂಸ್ಥೆಯು ಕರ್ನಾಟಕದಲ್ಲಿ ಒಂದು ಅಗ್ರಗಣ್ಯ ಶಿಕ್ಷಣ ಕರ್ತೃತ್ವ ಸಂಸ್ಥೆಯಾಗಿ ಬೆಳೆಯಿತು ಎಂದು ತಿಳಿಸುತ್ತಾರೆ. ಈ ಬೆಳವಣಿಗೆ ಇಂದಿನ ಕರ್ನಾಟಕ ರಾಜ್ಯದಾದ್ಯಂತ ಲಿಂಗಾಯತ ಶಿಕ್ಷಣ ಪ್ರಸಾರಕ್ಕೆ, ಆ ಮೂಲಕ ಲಿಂಗಾಯತರ ಆಧುನೀಕರಣಕ್ಕೂ ಪ್ರಭಾವ ಬೀರಿತು. ಮೊದಲು ಧಾರ್ಮಿಕ ಶಿಕ್ಷಣ ಒದಗಿಸಲಷ್ಟೇ ಪ್ರಾಮುಖ್ಯತೆ ನೀಡಿದ್ದ ಮಠಗಳು "ಆಧುನಿಕ, ವೈಜ್ಞಾನಿಕ ಮತ್ತು ತಾಂತ್ರಿಕ ಶಿಕ್ಷಣ ನೀಡಲು ಮುಂದಾದವು. ಜನಪ್ರಿಯತೆಯ ಸಮಗ್ರ, ಎಂದರೆ ರಾಷ್ಟ್ರದಲ್ಲಿ

ಲಿಂಗಾಯತ ಆಧುನೀಕರಣದ ಜನಾದರಣೀಯ ಸಮಗ್ರ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಲು ಮಠಗಳೇ ಸ್ವತಃ ಆಧುನೀಕರಣಗೊಂಡಿವೆ".

ಶಿಕ್ಷಣ ಸಂಸ್ಥೆಗಳ ಪರಿಣಾಮಕಾರಿ ಪ್ರಗತಿ ಹೇಗೆ ಸಾಧ್ಯವಾಯಿತೆಂಬುದನ್ನು ವಿವರಿಸಲು, ಈಶ್ವರನ್ ೧೩-೦೪-೧೯೭೯ರಂದು ನಡೆದ ಕೆ.ಎಲ್.ಇ. ಸೊಸೈಟಿಯ ವಜ್ರಮಹೋತ್ಸವ ಸಂದರ್ಭದಲ್ಲಿ ಕರ್ನಾಟಕದ ಸಚಿವರಾಗಿದ್ದ ಪಾಟೀಲ ಅವರ ಭಾಷಣದ ಮಾತುಗಳನ್ನು ಉಲ್ಲೇಖಿಸುತ್ತಾರೆ: ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆಯನ್ನು ಕಟ್ಟಲು ಶ್ರಮಿಸಿದವರು ಶರಣ ಪರಂಪರೆಗೆ ಸೇರಿದವರು. ಅವರಿಗೆ ವಿಶ್ವಭ್ರಾತೃತ್ವದಲ್ಲಿ ವಿಶ್ವಾಸವಿತ್ತು. ಅವರ ಜಗತ್ತು ಒಂದು ಜ್ಞಾನಭಂಡಾರವಾಗಿತ್ತು. ನಮ್ಮ ಶ್ರಮದ ಪೂರ್ಣಫಲದ ಮೇಲೆ ನಮಗೆ ಹಕ್ಕಿಲ್ಲ. ನಾವು ನಮ್ಮ ಅಸ್ತಿತ್ವಕ್ಕೆ ಎಷ್ಟು ಬೇಕೋ ಅಷ್ಟನ್ನು ಇಟ್ಟುಕೊಂಡು, ಉಳಿದುದನ್ನು ಸಮಾಜ ಭಂಡಾರಕ್ಕೆ ಸಲ್ಲಿಸಬೇಕು. ಇದು ಲಿಂಗಾಯತ ಧರ್ಮದ ಮುಖ್ಯ ತಿರುಳು. ಈ ಶಿಕ್ಷಣ ಸಂಸ್ಥೆಯು ಅಂತಹ ಒಂದು ಸಹಕಾರ ಜೀವನದ ಸೂತ್ರಬದ್ಧತೆಯ ಒಂದು ಪ್ರಾತ್ಯಕ್ಷಿಕೆಯಾಗಿ ಬೆಳೆದಿದೆ". ಹೀಗೆ ಶಿಕ್ಷಣ ಕ್ಷೇತ್ರದಲ್ಲಿ ನಡೆದ ಈ ಗೃಹಸ್ಥ ಪ್ರಯತ್ನ ಲಿಂಗಾಯತ ಧರ್ಮದ ಮುಖ್ಯ ಸಿದ್ಧಾಂತ ಸೂತ್ರಗಳಿಗೆ ಅನುಗುಣವಾಗಿದೆ.

ಮಠಾಧಿಪತಿಗಳು ತಮ್ಮ ಮಠದ ಹತ್ತಿರದ ಹಳ್ಳಿಗಳಿಗೆ ಭೇಟಿ ನೀಡಿ, ಅಲ್ಲಿರುವ ಪ್ರಾಥಮಿಕ ಶಿಕ್ಷಣದ ಕೊರತೆಯಿಂದ ಹಳ್ಳಿಗರು ಅನಕ್ಷರಸ್ಥರಾಗಿ ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುವುದನ್ನು ಗಮನಿಸಿ ಸೂಕ್ತ ಪರಿಸರ ಒದಗಿಸಿದ ನಿದರ್ಶನಗಳೂ ಇವೆ. ಹೀಗೆ ಉತ್ತರ ಕರ್ನಾಟಕದ ಭಾಲ್ಕಿಯ ಹಿರೇಮಠದ ಪೂಜ್ಯರು (ಶ್ರೀ ಚನ್ನಬಸವ ಪಟ್ಟದ್ದೇವರು) ತಮ್ಮ ಕೆಲವು ಶಿಷ್ಯರು ಬೋಧಕ ತರಬೇತಿ ಪಡೆಯುವಂತೆ ಮಾಡಿದ್ದಾರೆ. ಅವರಿಗೆ ಊಟ-ವಸತಿ ವ್ಯವಸ್ಥೆ ಮಾಡಿ ನಂತರ ಗ್ರಾಮೀಣ ಶಾಲೆಗಳನ್ನು ಆರಂಭಿಸಿದ್ದಾರೆ. ಬಹುಶಃ ಇತರ ಮಠಗಳಲ್ಲೂ ಇಂತಹ ಸೇವಾ ಕಾರ್ಯ ನಡೆದಿದೆ ಎಂದು ಹೇಳಬಹುದು. ಇದಕ್ಕೆ ೨೦ನೆಯ ಶತಮಾನದ ಮಧ್ಯಭಾಗದಲ್ಲಿ ೪೦ ವರ್ಷಗಳ ಕಾಲ ಸಿರಿಗೆರೆ ತರಳಬಾಳು ಬೃಹನ್ಮಠದ ಮುಖ್ಯಸ್ಥರಾಗಿ ಹಿರಿಯ ಶಿಕ್ಷಣ ಅಗ್ರಗಾಮಿಗಳಾಗಿದ್ದ ಶ್ರೀ ಶಿವಕುಮಾರ ಸ್ವಾಮಿಗಳನ್ನು ಉದಾಹರಿಸಬಹುದು.

ಶೌಟನ್, ಶಿಕ್ಷಣದ ಆಶ್ರಯ ತಾಣಗಳಾಗಿ ಮಹತ್ವದ ಸ್ಥಾನ ಪಡೆದಿರುವ ಗುರುಸ್ಥಲ ಪರಂಪರೆಯ ಎರಡು ದೊಡ್ಡ ಮಠಗಳನ್ನು ಉಲ್ಲೇಖಿಸುತ್ತಾರೆ. ಅವುಗಳಲ್ಲಿ ಒಂದು ಸುತ್ತೂರುಮಠ ಮತ್ತು ಇನ್ನೊಂದು ಈಗಾಗಲೇ ಪ್ರಸ್ತಾಪಿಸಲ್ಪಟ್ಟಿರುವ ಸಿರಿಗೆರೆ ತರಳಬಾಳು ಮಠ. ೧೯೯೩ರ ಜುಲೈನಲ್ಲಿ ತರಳುಬಾಳು ಮಠದ ಪೂಜ್ಯರಾದ ಡಾ. ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು ನಮಗೆ ಬರೆದಿರುವ ವೈಯಕ್ತಿಕ ಪತ್ರದಲ್ಲಿ, "ಲಿಂಗಾಯತ ಮಠಗಳು ಸಲ್ಲಿಸಿರುವ ಸಾಮಾಜಿಕ ಮತ್ತು ಶೈಕ್ಷಣಿಕ ಚಟುವಟಿಕೆಗಳ ಬಗೆಗೆ ಇಂಗ್ಲಿಷ್‌ನಲ್ಲಾಗಲೀ ಅಥವಾ ಕನ್ನಡದಲ್ಲಾಗಲೀ ದೊರೆಯುವ ಯಾವುದಾದರೂ ಪುಸ್ತಕವಿರುವಂತೆ ಕಾಣುವುದಿಲ್ಲ. ಈ ವಿಷಯದ ಬಗೆಗೆ ಸಂಶೋಧಕರಿಂದ ನಡೆಯುವ ಯಾವುದೇ ಅಧ್ಯಯನ ನಿಜಕ್ಕೂ ಅತ್ಯಂತ ಸಾರ್ಥಕವಾದ ಕೆಲಸವಾಗುತ್ತದೆ" ಎಂದು ತಿಳಿಸಿದ್ದರು. ಆ ಪತ್ರದ ಜೊತೆಯಲ್ಲಿ ಕಳುಹಿಸಿದ್ದ ಸಾಹಿತ್ಯ ತರಳಬಾಳು ಮಠದ ಶೈಕ್ಷಣಿಕ ಅಭಿವೃದ್ಧಿ ಕಾರ್ಯಗಳ ಬಗ್ಗೆ ನಮ್ಮ ತಿಳಿವಳಿಕೆಗೆ ಆಧಾರವಾಯಿತು.

ಪೂಜ್ಯ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳ ಹಿಂದಿನ ಗುರುಗಳಾದ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ೧೯೪೬ರಲ್ಲಿ ಸಿರಿಗೆರೆಯಲ್ಲಿ ಒಂದು ಪ್ರೌಢಶಾಲೆ ಆರಂಭಿಸಿದರು. ಗ್ರಾಮೀಣ ಶಿಕ್ಷಣದ ಆತ್ಯಂತಿಕ ಅಗತ್ಯವನ್ನು ಮನಗಂಡು ೧೯೬೨ರಲ್ಲಿ ಶ್ರೀ ತರಳಬಾಳು ಜಗದ್ಗುರು ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿದುದು ಒಂದು ಹೊಸ ಶಕೆಯನ್ನೇ ಆರಂಭಿಸಿದಂತಾಯಿತು. ಡಾ. ಶ್ರೀ ಶಿವಮೂರ್ತಿ ಶಿವಾಚಾರ್ಯರು, "ಹಿರಿಯ ಮಹಾಸ್ವಾಮಿಗಳ ಅದ್ಭುತ ಉತ್ಸಾಹ ಮತ್ತು ಸಂಕಲ್ಪದ ಫಲವಾಗಿ, ತರಳಬಾಳು ಮಠದಿಂದ ನಿರ್ವಹಿಸಲ್ಪಡುತ್ತಿರುವ ಶಿಕ್ಷಣ ಸಂಸ್ಥೆಗಳ ಸಂಖ್ಯೆ ೧೦೯ಕ್ಕೆ ವೃದ್ಧಿಯಾಗಿದೆ. ಕರ್ನಾಟಕ ರಾಜ್ಯದ ಹತ್ತು ಜಿಲ್ಲೆಗಳಲ್ಲಿ ಶಾಲಾ ಕಾಲೇಜುಗಳನ್ನು ಹೊಂದಿರುವ ಅತ್ಯಂತ ದೊಡ್ಡ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಒಂದಾಗಿದೆ. ಮಠದ ಶಿಕ್ಷಣ ಸಂಸ್ಥೆಗಳಲ್ಲಿ ಎಲ್ಲಾ ಜಾತಿ-ಮತಗಳಿಗೆ ಸೇರಿದ ೨೮,೦೦೦ದಷ್ಟು ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದಾರೆ. ಜೊತೆಗೆ ಈ ಶಿಕ್ಷಣ ಸಂಸ್ಥೆಗಳಿಗೆ ಹೊಂದಿಕೊಂಡು ಯಾವುದೇ ಜಾತಿ ಮತ ಭೇದವಿಲ್ಲದೆ ೬೦೦೦ ದಷ್ಟು ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿ ಸೌಲಭ್ಯವಿರುವ ೪೮ ವಿದ್ಯಾರ್ಥಿ ನಿಲಯಗಳಿವೆ" ಎಂದು ಬರೆದಿದ್ದಾರೆ.

> ನಡೆಯುವ ಎಲ್ಲರ ಜೊತೆ ಎಷ್ಟು ದೂರವಾದರೂ
> ನಡೆದೇನು. ಆದರೆ ಹಾದುಹೋಗುವ ಮೆರವಣಿಗೆಯನ್ನು
> ನೋಡುತ್ತ ನಿಲ್ಲಲಾರೆ.
> -ಖಲೀಲ್ ಗಿಬ್ರಾನ್

ಲಿಂಗಾಯತ ಸಮಾಜದ ಪ್ರಬಲ ಕೇಂದ್ರವಾಗಿರುವ ಕರ್ನಾಟಕ ರಾಜ್ಯದಲ್ಲೂ ಸಹ ಲಿಂಗಾಯತ ಮಠಗಳು, ಉಪಮಠಗಳು ಮತ್ತಿತರ ಸ್ವರೂಪದ ಸಂಸ್ಥೆಗಳ ಒಂದು ಸಮಗ್ರ ಚಿತ್ರವನ್ನು ಪಡೆಯುವುದು ಕಷ್ಟವಾಗಿದೆ. ಸಿರಿಗೆರೆಯ ತರಳಬಾಳು ಜಗದ್ಗುರು ಬೃಹನ್ಮಠಕ್ಕೆ ಸಂಬಂಧಿಸಿದ ಎಲ್ಲ ಧಾರ್ಮಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಸಂಸ್ಥೆಗಳ ಒಂದು ನಕ್ಷೆ ಮಾತ್ರ ನಮಗೆ ದೊರಕಿತು. (ಬಹುಶಃ ಹೆಚ್ಚು ಹುಡುಕಿದರೆ ಇನ್ನೂ ಕೆಲವು ಮಠಗಳ ಮಾಹಿತಿ ದೊರಕುತ್ತಿತ್ತೆಂದು ಕಾಣುತ್ತದೆ). ತರಳಬಾಳು ಮಠದ ಈಗಿನ ಮುಖ್ಯ ಗುರುಗಳು, ವೀರಶೈವ ಮಠಗಳು ಗ್ರಾಮಾಂತರ ಶಿಕ್ಷಣ ಅಭಿವೃದ್ಧಿಯಲ್ಲಿ ವಹಿಸಿರುವ ಪ್ರಮುಖ ಮಠಗಳ ಪಾತ್ರವನ್ನು ಸೂಚಿಸುವ ಒಂದಷ್ಟು ತಃಖ್ತೆಗಳು ಮತ್ತು ಅಂಕಿ-ಅಂಶಗಳನ್ನು





ಒದಗಿಸಿದರು. ಉದಾಹರಣೆಗೆ ಸಿರಿಗೆರೆ ಮಠ ಮತ್ತಿತರ ಹತ್ತು ಪ್ರಮುಖ ಲಿಂಗಾಯತ ಮಠಗಳು ನಡೆಸುತ್ತಿರುವ ಶಿಕ್ಷಣ ಸಂಸ್ಥೆಗಳ ೧೯೯೦ರ ವರೆಗಿನ ಸಂಖ್ಯೆಯನ್ನಷ್ಟೇ ಕೊಡಲಾಗಿದೆ.

೧೯೧೩ರಿಂದ ಆರಂಭವಾಗಿ ೧೯೪೮ರಲ್ಲಿ ಶ್ರೀ ಶಿವಕುಮಾರಸ್ವಾಮಿಗಳು ಆಗ ಇದ್ದ ೨೮ ಸಂಸ್ಥೆಗಳ ಜೊತೆಗೆ ಸೇರಿಸಿದ ೨ ಸಂಸ್ಥೆಗಳ ನಂತರ ೧೯೭೬ರಲ್ಲಿ ಶ್ರೀ ಶಿವಮೂರ್ತಿ ಶಿವಾಚಾರ್ಯರು ಮಠದ ಮುಖ್ಯಸ್ಥರಾದಾಗ ಆ ಸಂಖ್ಯೆ ೧೭೪ಕ್ಕೆ ಏರಿತ್ತು. ೧೯೯೦ರಲ್ಲಿ ಅದು ೨೦೮ರಷ್ಟಾಯಿತು. ಇವುಗಳಲ್ಲಿ ಶಾಲೆಗಳು, ಕಾಲೇಜುಗಳು, ವಿದ್ಯಾರ್ಥಿನಿಲಯಗಳು ಮತ್ತು ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂಸ್ಥೆಗಳು ಸೇರಿವೆ.

ಈ ಸೇವಾಪಥದಲ್ಲಿ ಅಗ್ರಸ್ಥಾನದ ಪಾತ್ರವಹಿಸಿರುವ ಮೂರು ಮಠಗಳೆಂದರೆ ಸಿರಿಗೆರೆ (ಚಿತ್ರದುರ್ಗ), ಸಿದ್ಧಗಂಗಾ (ತುಮಕೂರು) ಮತ್ತು ಸುತ್ತೂರು (ಮೈಸೂರು) ಮಠಗಳು. ಅದೇ ಸಾಲಿನಲ್ಲಿ ಚಿತ್ರದುರ್ಗ, ಗದಗ, ಹುಬ್ಬಳ್ಳಿ, ಮುಂಡರಗಿ, ಭಾಲ್ಕಿ, ಆನಂದಪುರ ಮತ್ತು ಹಾವೇರಿ ಮಠಗಳೂ ಬರುತ್ತವೆ. ಈ ಮಠಗಳ ಬಹುತೇಕ ಸಂಸ್ಥೆಗಳು ಗ್ರಾಮೀಣ ಪ್ರದೇಶಗಳಲ್ಲೇ ಇವೆ. ಸಿರಿಗೆರೆ ಮಠದ ೧೫೫ ಸಂಸ್ಥೆಗಳಲ್ಲಿ ೧೨೦ ಸಂಸ್ಥೆಗಳು ಗ್ರಾಮೀಣ ಪರಿಸರದಲ್ಲಿವೆ.

ಮೇಲೆ ಹೇಳಿದ ಹನ್ನೊಂದು ಮಠಗಳ ಶಿಕ್ಷಣ ಸಂಸ್ಥೆಗಳ ಸಂಖ್ಯೆ ಕೆಳಗೆ ಕಂಡಂತಿದೆ. ಹೋಲಿಕೆಗಾಗಿ ನಾವು ಸಿರಿಗೆರೆ ಅಂಕಿಗಳನ್ನು ಪಕ್ಕದಲ್ಲಿ ಕೊಟ್ಟಿದ್ದೇವೆ;

(* ಪ್ರಬಂಧಕಾರರಿಗೆ ದೊರೆತ ಮಾಹಿತಿ ಇದು. ಈ ಅಂಕಿ-ಅಂಶಗಳಲ್ಲಿ ಹೆಚ್ಚು ಕಡಿಮೆಗಳಿರಬಹುದು. ಇದು ೧೯೯೦ರ ವರೆಗಿನ ಮಾಹಿತಿಯಷ್ಟೆ. ನಂತರ ಆಗಿರುವ ಬೆಳವಣಿಗೆ ಅದ್ಭುತವಾಗಿದೆ.)

| ಕ್ರ.ಸಂ. | ಶಿಕ್ಷಣ ಸಂಸ್ಥೆಗಳು | ಹನ್ನೊಂದು ಮಠಗಳು* | ಸಿರಿಗೆರೆ ಮಠ |
|---|---|---|---|
| ೧ | ಶಿಶುವಿಹಾರಗಳು | ೩೧ | ೫ |
| ೨ | ಪ್ರಾಥಮಿಕ ಶಾಲೆಗಳು | ೩೪ | ೩ |
| ೩ | ಪ್ರೌಢಶಾಲೆಗಳು | ೧೮೨ | ೭೩ |
| ೪ | ಪದವಿಪೂರ್ವ ಕಾಲೇಜುಗಳು | ೩೩ | ೧೦ |
| ೫ | ಪದವಿ ಕಾಲೇಜುಗಳು | ೨೭ | ೫ |
| ೬ | ಶಿಕ್ಷಣ ಪದವಿ (ಬಿ.ಎಡ್) ಕಾಲೇಜುಗಳು | ೩ | ೧ |
| ೭ | ಪಾಲಿಟೆಕ್ನಿಕ್‌ಗಳು | ೨೨ | ೧ |
| ೮ | ಇಂಜಿನಿಯರಿಂಗ್ ಕಾಲೇಜುಗಳು | ೪ | ೧ |
| ೯ | ವೈದ್ಯಕೀಯ ಕಾಲೇಜುಗಳು | ೪ | - |
| ೧೦ | ಆಸ್ಪತ್ರೆಗಳು | ೮ | - |
| ೧೧ | ವಿದ್ಯಾರ್ಥಿ ನಿಲಯಗಳು | ೧೩೭ | ೬೩ |
| ೧೨ | ಸಂಸ್ಕೃತ ಪಾಠಶಾಲೆಗಳು | ೪ | ೪ |
| | ಒಟ್ಟು | ೪೮೯ | ೧೬೬ |

* ಈ ಸಾಲಿನಲ್ಲಿ ನಾಗನೂರು (ಬೆಳಗಾವಿ), ಹರಪನಹಳ್ಳಿ, ಹಾರನಹಳ್ಳಿ, ಹೊಸಪೇಟೆ ಇತ್ಯಾದಿ ಇನ್ನೂ ಅನೇಕ ಮಠಗಳಿವೆ.

ಈ ಅಂಕಿ-ಅಂಶಗಳನ್ನು ಗಮನಿಸಿದಾಗ ಪ್ರೌಢಶಾಲೆಗಳು ಮತ್ತು ವಿದ್ಯಾರ್ಥಿನಿಲಯಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಇದಕ್ಕೆ ಕಾರಣ ಪ್ರಾಥಮಿಕ ಹಂತದ ಶಿಕ್ಷಣವನ್ನು ಸರ್ಕಾರ ನೋಡಿಕೊಳ್ಳುತ್ತಿರುವುದು. ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದಂತೆ ಪದವಿ ಕಾಲೇಜುಗಳಿಗೆ ಒತ್ತು ಕೊಡಲಾಗಿದೆ. ತಾಂತ್ರಿಕ ಮತ್ತು ವೈದ್ಯಕೀಯ ಕಾಲೇಜುಗಳ ಸಂಖ್ಯೆ ತಲಾ ೪ ಇವೆ. ಪ್ರೌಢಶಾಲೆಗಳು ಹಾಗೆಯೇ ಕಲಾಕಾಲೇಜುಗಳು ಹೆಚ್ಚಿನ ಸಂಖ್ಯೆಯಲ್ಲಿರಲು ಬಹುಶಃ ಸರ್ಕಾರ ಅಂತಹ ಶಾಲೆಗಳಿಗೆ ನೀಡುವ ಸಹಾಯಧನ ಕಾರಣವಿರಬಹುದು.

೧೯೬೦ರ ದಶಕದಲ್ಲಿ ಪ್ರಸಿದ್ಧ ಅಮೆರಿಕನ್ ಸಮಾಜ ವಿಜ್ಞಾನಿಗಳಾದ ರುಡೋಲ್ಫ್ ಮತ್ತು ರುಡೋಲ್ಫ್ ಅವರೊಡನೆ ಕೆಲಸ ಮಾಡುತ್ತಿರುವ ಮದನ್ ಮತ್ತು ಹಲ್ಬರ್ ಅವರು ತಮ್ಮ ಅಧ್ಯಯನದಲ್ಲಿ ಕರ್ನಾಟಕದಲ್ಲಿ ನಡೆಯುತ್ತಿರುವ ಶಿಕ್ಷಣಕ್ಕೆ ವಿಶೇಷ ಗಮನ ಕೊಟ್ಟಿದ್ದಾರೆ. ಒಟ್ಟಾರೆ ಖಾಸಗಿ ಶಿಕ್ಷಣ ಸಂಸ್ಥೆಗಳು (ಮುಖ್ಯವಾಗಿ ಲಿಂಗಾಯತರ)

ಮತ್ತು ಅವುಗಳ ಕಾರ್ಯನಿರ್ವಹಣೆಯ ಬಗೆಗೆ ಸರ್ಕಾರಕ್ಕೆ ತೃಪ್ತಿ ಇರುವುದನ್ನು ಅವರು ಕಂಡಿದ್ದಾರೆ. ಕರ್ನಾಟಕ ರಾಜ್ಯದ ಇಬ್ಬರು ಅನುಕ್ರಮ ಶಿಕ್ಷಣ ಆಯುಕ್ತರನ್ನು ಸಂದರ್ಶಿಸಿದಾಗ ಈ ಅಂಶ ನಮಗೂ ದೃಢಪಟ್ಟಿತು. ಆದರೂ ಮದನ್ ಮತ್ತು ಹಲ್ಬರ್ ಅವರು ಭೇಟಿ ಮಾಡಿದ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿರುವ 'ಪಾರಂಪರಿಕ ಸಾಮಾಜಿಕ ವ್ಯವಸ್ಥೆಯ ಕಡ್ಡಾಯ' ಆಧುನೀಕರಣದ ಕಾರಭಾರಿಗಳಾಗಿ ಅವು ಕೆಲಸ ಮಾಡಲು ಅಡ್ಡಿಯಾಗಿದೆ ಎನ್ನುತ್ತಾರೆ. ಆದರೆ ಅಲ್ಲಿನ ಶಿಕ್ಷಣ ಕ್ಷೇತ್ರದಲ್ಲಿ ಭಾರತೀಯ ಆಧುನೀಕರಣದ ಚಟುವಟಿಕೆಗಳನ್ನು ನಾವು ಗಮನಿಸಿದೆವು. ಬಹುಶಃ ಮದನ್ ಮತ್ತು ಹಲ್ಬರ್ ಅವರು ಪಾಶ್ಚಿಮಾತ್ಯ ಆಧುನೀಕರಣವನ್ನು ಅತಿಯಾಗಿ ನಿರೀಕ್ಷಿಸಿರಬಹುದು.

**ಸಿರಿಗೆರೆ ಶಿಕ್ಷಣ ಸಂಸ್ಥೆಗಳ ಕೆಲವು ಲಕ್ಷಣಗಳು :**

ಭಾರತೀಯ ಶಿಕ್ಷಣದ ಎಲ್ಲ ಹಂತಗಳಲ್ಲಿ ಎದ್ದು ಕಾಣುವ ಕಠಿಣವಾದ ಪರೀಕ್ಷಾ ವ್ಯವಸ್ಥೆಯಿಂದಾಗಿ ಖಾಸಗಿ ಶಿಕ್ಷಣ ಸಂಸ್ಥೆಗಳ ವೈಯಕ್ತಿಕ ಸಂಸ್ಥೆಗಳು ಅಥವಾ ಸಮೂಹಗಳು ತಮ್ಮದೇ ಆದ ವೈಶಿಷ್ಟ್ಯವನ್ನು ಬೆಳೆಸಿಕೊಳ್ಳಲು ಕಷ್ಟವಾಗಿದೆ. ಆದರೂ ವಿದ್ಯಾರ್ಥಿಗಳು ಮತ್ತು ಶಿಕ್ಷಕರ ಆಸಕ್ತಿಯ ವಿಶೇಷ ಕ್ಷೇತ್ರಗಳ ಬೆಳವಣಿಗೆ ಈ ಶಾಲೆಗಳಿಗೆ ಸಾಧ್ಯವಿದೆ.

> ನಮ್ಮ ಮೌನಗಳನ್ನು ಯಾರು ಹಾಡಬಲ್ಲನೋ ಅವನೇ ಮಹಾನ್ ಗಾಯಕ.
>
> -ಖಲೀಲ್ ಗಿಬ್ರಾನ್

ಹೀಗಾಗಿ, ಸಿರಿಗೆರೆ ಶಾಲೆಗಳು ಬಹುತೇಕ ಗ್ರಾಮೀಣ ಪ್ರದೇಶಗಳಲ್ಲೇ ಸ್ಥಾಪಿತವಾಗಿರುವುದು ಪರಿಸರದಲ್ಲಿ ತೀವ್ರಾಸಕ್ತಿ ಬೆಳೆಸಿಕೊಳ್ಳಲು ಉತ್ತೇಜಕವಾಗಿದೆ. ಸಿರಿಗೆರೆ ಮಠದ ಮುಖ್ಯಸ್ಥರಾದ ಡಾ. ಶಿವಮೂರ್ತಿ ಶಿವಾಚಾರ್ಯ ಸ್ವಾಮೀಜಿ ಅವರು ದೆಹಲಿಯಲ್ಲಿರುವ ಬಂಜರು ಭೂಮಿ ಅಭಿವೃದ್ಧಿ ಸಂಸ್ಥೆಯ ರಾಷ್ಟ್ರೀಯ ಪ್ರಯತ್ನದಲ್ಲಿ ಜೊತೆಗೂಡಿ ೧೯೮೦ರಲ್ಲಿ ತರಳಬಾಳು ಗ್ರಾಮೀಣ ಅಭಿವೃದ್ಧಿ ಪ್ರತಿಷ್ಠಾನ (TRDF) ಸ್ಥಾಪಿಸಿದ್ದಾರೆ. ಮರಗಳನ್ನು ಬೆಳೆಸುವುದು ಶತಶತಮಾನಗಳಿಂದ ಲಿಂಗಾಯತ ಮಠಗಳ ಚಟುವಟಿಕೆಗಳ ಒಂದು ಭಾಗವಾಗಿದ್ದು, ಹೊಸ ಅಂಶವೆಂದರೆ, ೧೯೮೨ರಿಂದ ನಡೆದಿರುವ ಸಾಮಾಜಿಕ ಅರಣ್ಯ ಕಾರ್ಯಕ್ರಮದ ಬೃಹತ್ ಪ್ರಮಾಣದ ಬೆಳವಣಿಗೆ. ಮಠದಿಂದ ಒದಗಿಸಲಾಗುವ ಸಸಿಗಳನ್ನು ನೆಡುವುದು ಮತ್ತು ವಿವಿಧ ಬಗೆಯ ಸಸಿಗಳನ್ನು ಬೆಳೆಸುವ ಈ ಕಾರ್ಯಕ್ರಮದಲ್ಲಿ ಮಠದ ಶಾಲೆಗಳ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಕ್ರಿಯಾಶೀಲ ಪಾತ್ರವಹಿಸಿದ್ದಾರೆ. ಶಾಲಾ ಮಕ್ಕಳು ಹಳ್ಳಿಗಳಲ್ಲಿ ಬಳಕೆಗೆ ಬೇಕಾಗುವ ಸೌದೆ, ಹುಲ್ಲು, ಹಣ್ಣು, ತರಕಾರಿ ಇತ್ಯಾದಿಗಳನ್ನು ನೀಡುವಂತಹ ವಿವಿಧ ತಳಿಯ ಮರ-ಗಿಡ-ಬಳ್ಳಿಗಳನ್ನು ಬೆಳೆಸುತ್ತಾರೆ.

ಈ ದಿಸೆಯಲ್ಲಿ ಸಿರಿಗೆರೆ ಮಠ ನಡೆಸಿರುವ ಪ್ರಯತ್ನ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಗಮನ ಸೆಳೆದಿದೆ. ಅದಕ್ಕೆ ನಿರ್ದಿಷ್ಟ ಕಾರಣವೇನೆಂದರೆ, ಅಲ್ಲಿ ಮರ-ಗಿಡ ಬೆಳೆಸುವ ಕಾರ್ಯ ವೈಜ್ಞಾನಿಕ ಮೇಲ್ವಿಚಾರಣೆಯಲ್ಲಿ ನಡೆಯುತ್ತಿರುವುದು ಮತ್ತು ಯಶಸ್ಸು ಹಾಗೂ ವೈಫಲ್ಯಗಳೆರಡರ ಬಗೆಗೂ ಕ್ರಮವಾಗಿ ವರದಿ ಮಾಡುವುದು.

ಸಿರಿಗೆರೆ ಶಾಲಾ ಕಾಲೇಜುಗಳು ಯೋಗಾಭ್ಯಾಸ ಕಾರ್ಯಕ್ರಮಗಳಿಗೆ ಒತ್ತು ಕೊಟ್ಟಿವೆ. ಪರಿಸರ ಸಂರಕ್ಷಣೆಗೆ ಮಹತ್ವ ಕೊಡುವುದರ ಜೊತೆಗೆ ವೀರಶೈವ ಸಂಸ್ಕೃತಿ ಸಂಬಂಧದ ನಾಟಕ ಮತ್ತು ಸಂಗೀತದ ಚಟುವಟಿಕೆಗಳಿಗೂ ಅವಕಾಶ ಕಲ್ಪಿಸಿವೆ. ಮಠದ ದಾವಣಗೆರೆ ಕಾಲೇಜಿಗೆ ನಾವು ಭೇಟಿ ನೀಡಿದಾಗ ದೊರೆತ ಒಂದು ವಾರ್ಷಿಕ ವರದಿಯಲ್ಲಿ ನಮಗೆ ತಿಳಿದಂತೆ ಅಲ್ಲಿನ ಇಂಗ್ಲಿಷ್ ವಿಭಾಗದ ವಿದ್ಯಾರ್ಥಿಗಳ ಪರೀಕ್ಷೆಗಳು ಮತ್ತು ಶಾಲಾ ಸಮವಸ್ತ್ರಗಳು, ಹಾಗೆಯೇ ಇಂಗ್ಲಿಷ್ ಭಾಷೆಯಲ್ಲಿ ಅವರಿಗಿರುವ ಒಳ್ಳೆಯ ಪ್ರಭುತ್ವ-ಇವುಗಳ ಬಗೆಗೆ ಅವರಿಗಿರುವ ಸ್ವತಂತ್ರ ವಿಮರ್ಶಾ ಸಾಮರ್ಥ್ಯಗಳ ಪ್ರತ್ಯಕ್ಷ ದರ್ಶನವಾಯಿತು.

ಕರ್ನಾಟಕದ ಮಠಗಳಲ್ಲಿ ವೀರಶೈವ ಸಿದ್ಧಾಂತಕ್ಕೆ ಅನುಗುಣವಾದ ಧಾರ್ಮಿಕ ಶಿಕ್ಷಣ ವ್ಯವಸ್ಥೆ ಅಸ್ತಿತ್ವದಲ್ಲಿರುವುದಕ್ಕೆ ನಮ್ಮಲ್ಲಿ ಯಾವುದೇ ಆಧಾರಗಳಿಲ್ಲ. ನಮಗೆ ಕನ್ನಡ ಪಠ್ಯಪುಸ್ತಕಗಳು ಮತ್ತು ವರದಿಗಳನ್ನು ಓದಲು ಬಾರದು. ನಾವು ಕೆಲವೇ ಶಾಲೆಗಳಿಗೆ ನೀಡಿದ ಸಂಕ್ಷಿಪ್ತ ಭೇಟಿಯಿಂದ ನಮ್ಮ ತಿಳಿವಳಿಕೆಗೆ ಬಂದುದೆಂದರೆ ಅವು ಉಪಯುಕ್ತವಾಗಿ ನಡೆಯುತ್ತಿವೆ ಎಂಬುದು. ಆದರೆ ನಿತ್ಯದ ಶಾಲಾ ಜೀವನದ ಏನನ್ನೂ ನಾವು ನೋಡಿಲ್ಲ. ಗ್ರಾಮೀಣ ಶಾಲೆಗಳನ್ನಂತೂ ನೋಡಿಯೇ ಇಲ್ಲ. ಬಹುತೇಕ ಲಿಂಗಾಯತ ಶಿಕ್ಷಣ ಸಂಸ್ಥೆಗಳಲ್ಲಿ ಸಹ ಶಿಕ್ಷಣ ವ್ಯವಸ್ಥೆಯಿದೆ.

**ಶೈಕ್ಷಣಿಕ ವಿವಾದಗಳು**

(ಈ ಭಾಗದಲ್ಲಿ ಖಾಸಗಿ ತಾಂತ್ರಿಕ ಕಾಲೇಜುಗಳಿಗೆ ಆರ್ಥಿಕ ನೆರವು, ವಂತಿಗೆ ಸಂಗ್ರಹ ಇತ್ಯಾದಿ ವಿಷಯಗಳ ಬಗೆಗೆ ಸರ್ಕಾರ ಮತ್ತು ಖಾಸಗಿ ಆಡಳಿತ ವರ್ಗದ ಮಧ್ಯೆ ಇರುವ ಭಿನ್ನಾಭಿಪ್ರಾಯಗಳಿಗೆ ಸಂಬಂಧಿಸಿದ್ದು ಅದು ಲಿಂಗಾಯತ ಧರ್ಮ ಅಥವಾ ಸಮಾಜಕ್ಕೆ ನೇರ ಸಂಬಂಧವಿಲ್ಲದ ಕಾರಣ ಆ ಭಾಗವನ್ನು ಅನುವಾದಿಸಿಲ್ಲ -ಅನುವಾದಕ)

**ಮುಕ್ತಾಯದ ಅನಿಸಿಕೆ**

ಈ ಪ್ರಬಂಧದಲ್ಲಿ ಅನೇಕ ಸಲ ಉಲ್ಲೇಖಿಸಲ್ಪಟ್ಟಿರುವ ಕೆ. ಈಶ್ವರನ್ ಅವರು ಭಾರತದ ಆಧುನೀಕರಣ ಮತ್ತು ಲಿಂಗಾಯತ ಪುನರುತ್ಥಾನದ ಮಧ್ಯೆ ನಿಕಟ ಸಂಬಂಧವನ್ನು ಎತ್ತಿ ಹಿಡಿಯಲು ಉತ್ಸುಕರಾಗಿದ್ದಾರೆ: "ಇಂತಹ ಸಮುದಾಯಗಳು...ಅವುಗಳ ಸಾಂಸ್ಕೃತಿಕ ಪರಂಪರೆಗಳು ಮತ್ತು ಅವುಗಳ ಸಾಂಸ್ಥಿಕ ವಿಧಾನಗಳು ಭಾರತದ ಯಶಸ್ವೀ ಆಧುನೀಕರಣಕ್ಕೆ ಅತ್ಯಂತ ಮಹತ್ವದ ಸಾಧನ ಸಂಪತ್ತು ಮತ್ತು ಭರವಸೆಗಳಾಗುತ್ತವೆ ಎಂದು ಹೇಳಿದರೆ ಅತಿಶಯೋಕ್ತಿಯಾಗುವುದಿಲ್ಲವೆಂದು ನಾನು ತಿಳಿದಿದ್ದೇನೆ"







ಏನೇ ಇದ್ದರೂ, ಈಶ್ವರನ್ ಸಮಕಾಲೀನ ಲಿಂಗಾಯತದ ಬಗೆಗೆ ಮಾಡಿರುವ ವರ್ಣನೆಯಲ್ಲಿ ಮಬ್ಬು ನೆರಳುಗಳೂ ಇವೆ. ಅವರು ೨೦ನೆಯ ಶತಮಾನದ ಆರಂಭದಲ್ಲಿದ್ದ ಗುರು-ವಿರಕ್ತ-ಜಂಗಮ ವ್ಯವಸ್ಥೆಯ ನಿಷ್ಕ್ರಿಯತೆಯ ಅಂಶಗಳತ್ತ ಗಮನ ಸೆಳೆಯುತ್ತಾರೆ.

ಆದರೆ ಈಶ್ವರನ್ ಅವರು ಸಮಕಾಲೀನ ಲಿಂಗಾಯತ ಸಮುದಾಯದೊಳಗೆ ಭಿನ್ನಾಭಿಪ್ರಾಯಗಳು ಮತ್ತು ವಿರೋಧಗಳನ್ನು ಹೆಚ್ಚು ಮಾಡುವುದರ ವಿರುದ್ಧ ಎಚ್ಚರಿಸುತ್ತಾರೆ. "ಈ ಧರ್ಮ ಸುದೀರ್ಘ ಇತಿಹಾಸದ ತರತಮವಿಲ್ಲದ, ಅದರಲ್ಲೂ ಅತ್ಯಂತ ಸೃಜನಾತ್ಮಕ ಧರ್ಮವಾಗಿದ್ದು ಶರಣ ಹಂತದ ಸಾಧನೆಗಳಿಂದ ಸ್ಫೂರ್ತಿ ಪಡೆದು ಅದನ್ನು ಒಂದು ಆಧುನಿಕ ಸಂಘಟಿತ ಲಿಂಗಾಯತ ಸಮಾಜ ನಿರ್ಮಾಣಕ್ಕಾಗಿ ಬಳಸುವುದು ಹೆಚ್ಚು ಸೂಕ್ತವಾದುದು" ಎನ್ನುತ್ತಾರೆ.

ಈಶ್ವರನ್ ಅವರು ಹೇಳುವ ಲಿಂಗಾಯತ ಜೀವನ ಸೂತ್ರಗಳನ್ನು ಪಾಲಿಸುವಲ್ಲಿ ಇಂದಿನ ಲಿಂಗಾಯತರಲ್ಲಿ ಬಹಳ ವ್ಯತ್ಯಾಸವಿದೆ. ನಾವು ಭೇಟಿ ಮಾಡಿದ ಲಿಂಗಾಯತರು ಬಾಹ್ಯಕುರುಹುಗಳಿಗೆ ಮಹತ್ವ ಕೊಡದೆ ಸಮಾಜ ಸೇವೆಯಲ್ಲಿ ಕಾಯಕ ಮತ್ತು ದಾಸೋಹಗಳಿಗೆ ಪ್ರಧಾನ ಮಹತ್ವ ನೀಡುತ್ತಾರೆ.

ಬಸವಣ್ಣ ಜಾತಿ ವ್ಯವಸ್ಥೆಯ ವಿರುದ್ಧ ಸಮಾನತೆಗಾಗಿ ಹೋರಾಡಿದ. ಆದರೆ ಇಂದು ಲಿಂಗಾಯತರನ್ನು ಅನೇಕ ಉಪಜಾತಿಗಳಿರುವ ಒಂದು ಜಾತಿ ಎಂದು ಪರಿಗಣಿಸಲಾಗಿದೆ. ಕೆಲವು ವೇಳೆ ಅವರನ್ನು 'ಜಾತಿ ವಿರೋಧಿ ಜಾತಿ' ಎಂದು ಕರೆಯುವುದುಂಟು. ಈ ಸಮುದಾಯದಲ್ಲಿ ಜಂಗಮರನ್ನು ಪುರೋಹಿತ ಉಪಜಾತಿ ಎಂದು ಪರಿಗಣಿಸಲಾಗುತ್ತದೆ. ಜಾತಿ ಶ್ರೇಣಿಯಲ್ಲಿ ಲಿಂಗಾಯತರನ್ನು ಸಾಮಾನ್ಯವಾಗಿ ಮೇಲ್ಜಾತಿ ಮತ್ತು ಕೆಳಜಾತಿಗಳ ಮಧ್ಯಸ್ಥಾನದಲ್ಲಿ ಇಡಲಾಗಿದೆ. ಆದರೆ ಮೇಲೆ ಹೇಳಿದಂತೆ ಕೆಲವು ಸಂದರ್ಭಗಳಲ್ಲಿ ಅವರು ಹಿಂದುಳಿದ ವರ್ಗಕ್ಕೆ ಸೇರಿದವರೆಂದು ಸ್ಪಷ್ಟಪಡಿಸಲು ಇಚ್ಛಿಸುತ್ತಾರೆ.

ಪ್ರಸ್ತುತ ಪರಿಸ್ಥಿತಿಯ ಒಂದು ಉದಾಹರಣೆಯಾಗಿ, ೧೯೯೫ರ ಬಸವ ಜರ್ನಲ್ ಜೂನ್ ಸಂಚಿಕೆಯಲ್ಲಿ ಕರ್ನಾಟಕದ ನೆರೆ ರಾಜ್ಯವಾದ ತಮಿಳುನಾಡಿನ ರಾಜಧಾನಿ ಮದ್ರಾಸ್‌ನಲ್ಲಿ ದಿ. ೨೮-೫-೯೫ರಂದು ಬಸವ ಜಯಂತಿಯನ್ನು ಹೇಗೆ ಆಚರಿಸಲಾಯಿತು ಎಂಬ ಬಗೆಗಿನ ಒಂದು ವರದಿಯಿಂದ ನಾವು ಉಲ್ಲೇಖಿಸುತ್ತಿದ್ದೇವೆ:

"ತಮಿಳುನಾಡಿನಲ್ಲಿ **ಜಂಗಮ**, **ಯೋಗೀಶ್ವರ**, **ತಾಂಬಿರಮ್**, **ಪಂಡಾರಮ್**, **ಆದಿಪಂಡಾರಮ್** ಇತ್ಯಾದಿ ೧೬ ಉಪಪಂಗಡಗಳಿರುವ ೧೫ ಲಕ್ಷ ವೀರಶೈವರಿದ್ದಾರೆ. ಈ ಎಲ್ಲ ೧೬ ಉಪಪಂಗಡಗಳನ್ನು ಒಂದುಗೂಡಿಸಿ 'ವೀರಶೈವ' ಎಂಬ ಒಂದೇ ಹೆಸರಿನಲ್ಲಿ ತರಬೇಕೆಂದು ಸರ್ವಾನುಮತದಿಂದ ನಿರ್ಣಯಿಸಲಾಯಿತು. ಬಹುತೇಕ ವೀರಶೈವರು ಭೂರಹಿತ ಕೃಷಿಕರು, ಸಣ್ಣ ಕರಕುಶಲಿಗಳು, ಹೂ ಮಾರುವವರು ಮತ್ತು ದೇವಾಲಯಗಳಲ್ಲಿ ಅರ್ಚಕರಾಗಿದ್ದು ಯಾವುದೇ ಆದಾಯವಿಲ್ಲದ ಕಾರಣ, ಅವರನ್ನು ಅತ್ಯಂತ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸಬೇಕು"

ಭಾರತದಲ್ಲಿ ಜಾತಿ ವ್ಯವಸ್ಥೆ ಅತ್ಯಂತ ಸಂಕೀರ್ಣವಾದುದು. ಈಗ ಕೆಳ ಮತ್ತು ಹಿಂದುಳಿದ ಜಾತಿಗಳಿಗೆ ಶಿಕ್ಷಣ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಮೀಸಲಾತಿ ನೀಡಿ ನೆರವಾಗುವ ಪ್ರಯತ್ನಗಳಿಂದಲೂ ಜಾತಿ ಸಂಕೀರ್ಣತೆ ಕಡಿಮೆಯಾಗಿಲ್ಲ. ಕೆಲವು ಸಂದರ್ಭಗಳಲ್ಲಿ ಲಿಂಗಾಯತರು ತಮ್ಮನ್ನು ಹಿಂದುಳಿದ ವರ್ಗಗಳ ಸಾಲಿಗೆ ಸೇರಿಸಬೇಕೆಂದು ಅಪೇಕ್ಷಿಸುತ್ತಾರೆ. ಮತ್ತೆ ಕೆಲವು ಸಂದರ್ಭಗಳಲ್ಲಿ ಬ್ರಾಹ್ಮಣರೊಡನೆ ಸ್ಪರ್ಧಿಸಬಯಸುತ್ತಾರೆ.

ಬಸವಣ್ಣನವರ ಸಮಾನತೆಯ ಹೋರಾಟ, ಮಡಿ-ಮೈಲಿಗೆಗಳ ಬಗೆಗಿದ್ದ ಬ್ರಾಹ್ಮಣ ನಿಯಮಗಳ ವಿರುದ್ಧವೂ ಆಗಿತ್ತು. ಇಷ್ಟಲಿಂಗ ಧಾರಣೆ ಎಲ್ಲ ಮೈಲಿಗೆಗಳನ್ನು ಕಳೆದು ಶುದ್ಧಗೊಳಿಸುತ್ತದೆ. ಆದರೆ ಇಂದಿನ ಅನೇಕ ಲಿಂಗಾಯತರು ಮಡಿ-ಮೈಲಿಗೆ ನಿಯಮಗಳನ್ನು ಪಾಲಿಸುತ್ತಿದ್ದಾರೆ. ಬೇರೆ ಬೇರೆ ಜಾತಿಗಳ ಮಧ್ಯೆ ನಡೆಯುವ ಅಂತರ್ ವಿವಾಹ ಮತ್ತು ಸಹಭೋಜನ ಇವು ಅತ್ಯಂತ ವಿರಳ ನಿಯಮಗಳಾಗಿವೆ. ಆದರೆ ಬಸವಣ್ಣ ಮತ್ತು ಅವನ ಅನುಯಾಯಿಗಳು ಕಟ್ಟುನಿಟ್ಟಾದ ಸಸ್ಯಾಹಾರಿಗಳಾಗಿದ್ದರು. ಮತ್ತು ಮದ್ಯಪಾನಗಳಿಂದ ದೂರವಿದ್ದರು. ಈ ಎರಡೂ ನಿಯಮಗಳನ್ನು ಇಂದಿನ ಬಹುತೇಕ ಲಿಂಗಾಯತರು ಅಂಗೀಕರಿಸಿದ್ದಾರೆ.

ಈ ಲಿಂಗಾಯತ ಅಧ್ಯಯನ ಅತ್ಯಂತ ಅಪೂರ್ಣ. ಆದರೆ ಭಾರತದ ಹೊರಗಡೆ ಲಿಂಗಾಯತರು ಹೆಚ್ಚು ಪರಿಚಿತರಾಗಿಲ್ಲದ ಕಾರಣ ಕನಿಷ್ಠ ಇಂತಹದೊಂದು ಸಂಕ್ಷಿಪ್ತ ಪ್ರಬಂಧವನ್ನಾದರೂ ಬರೆದಿಡುವುದು ಸೂಕ್ತವೆನಿಸಿತು. ಭಾರತದಲ್ಲಿ ಆಳವಾಗಿ ಬೇರೂರಿರುವ ಮತ್ತು ತನ್ನ ಶ್ರೀಮಂತ ಪರಂಪರೆಗಳಿಂದ ಈಗ ಈ ಸುಂದರ ಭಾರತ ದೇಶದಾಚೆಗೂ ಪ್ರಭಾವ ಪಡೆಯುತ್ತಿರುವ ಈ ಲಿಂಗಾಯತ ಚಳವಳಿಯನ್ನು ಕುರಿತು ಇನ್ನೂ ಆಳವಾಗಿ ಅಧ್ಯಯನ ನಡೆಸುವವರಿಗೆ ಇದು ಆಸಕ್ತಿ ಹುಟ್ಟಿಸಬಹುದೆಂದು ತಿಳಿದಿದ್ದೇವೆ.

○

> ನಿನ್ನ ಬಾಯಿ ತುಂಬ ಅನ್ನವಿದ್ದಾಗ ನೀನು ಹೇಗೆ ಹಾಡಬಲ್ಲೆ?
> ನಿನ್ನ ಕೈ ಚಿನ್ನದಿಂದ ತುಂಬಿದ್ದರೆ,
> ಅನುಗ್ರಹಕ್ಕಾಗಿ ನಿನ್ನ ಕೈಯನ್ನು ಹೇಗೆ ಮೇಲೆತ್ತಬಲ್ಲೆ?
>
> -ಖಲೀಲ್ ಗಿಬ್ರಾನ್



# ನ್ಯಾಯಾಧೀಶರ ಕೆನ್ನೆಗೆ ಏಟು (ನ್ಯಾಯಾಲಯ ನಿಂದನಾ ಕಾನೂನು)

-ವೆಂಕಟೇಶ ಕುಲಕರಣಿ, ನ್ಯಾಯವಾದಿ, ಧಾರವಾಡ

ಜೈಪುರದ ಮ್ಯಾಜಿಸ್ಟ್ರೇಟ ಕೋರ್ಟಿನಲ್ಲಿ ಒಬ್ಬ ವಕೀಲರು ಬಹಿರಂಗ ನ್ಯಾಯಾಲಯದಲ್ಲಿ ಮ್ಯಾಜಿಸ್ಟ್ರೇಟರ ಕೆನ್ನೆಗೆ ಹೊಡೆದರು. ಆ ವಕೀಲರು ಅದೇ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆಯಲ್ಲಿ ಆರೋಪಿಯಾಗಿದ್ದರು. ಕೇಸಿದ್ದ ದಿನ, ಅವರು ಹಾಜರಾತಿಗೆ ವಿನಾಯಿತಿ ನೀಡಬೇಕೆಂದು ಕೋರಿ ಅರ್ಜಿ ಸಲ್ಲಿಸಿ ಹೋದರು. ಕೇಸನ್ನು ಕೂಗಿಸಿದಾಗ ಅವರು ಹಾಜರಿರಲಿಲ್ಲ. ಮ್ಯಾಜಿಸ್ಟ್ರೇಟರು ಕೂಗಿಸಿದಾಗ, ಗೈರುಹಾಜರಿದ್ದ ಆರೋಪಿ - ವಕೀಲರ ಮೇಲೆ ಜಾಮೀನುರಹಿತ ವಾರಂಟ್ ಹೊರಡಿಸಿದರು. ಆರೋಪಿ ತನ್ನ ಅರ್ಜಿಯಲ್ಲಿ ತನ್ನ ಸ್ನೇಹಿತನ ತಂದೆಯ ಅಂತ್ಯಕ್ರಿಯೆಯಲ್ಲಿ ಭಾಗವಹಿಸುವುದಾಗಿ ಬರೆದಿದ್ದರು. ನ್ಯಾಯಾಲಯ ಆದೇಶ ಮಾಡಿದ ಮೇಲೆ, ವಕೀಲ ಪ್ರೇಮ ಸುರಾಣಾ, ಕೋರ್ಟಿಗೆ ಬಂದು 'ನೀವು ನನ್ನ ಅರ್ಜಿಯನ್ನು ಹೇಗೆ ತಳ್ಳಿಹಾಕಿದಿರಿ?' ಎಂದು ಕೇಳಿದರು. ಅದಕ್ಕೆ ಮ್ಯಾಜಿಸ್ಟ್ರೇಟರು 'ನಿಮ್ಮ ಮನವಿಯನ್ನು ಮುಂದಿನ ಮುದ್ದತಿಗೆ ವಿಚಾರಿಸುತ್ತೇನೆ' ಎಂದಾಗ, ಆಪಾದಿತ ಮ್ಯಾಜಿಸ್ಟ್ರೇಟರನ್ನು ಬೈಯ್ಯಲು ಪ್ರಾರಂಭಿಸಿದರು ಮತ್ತು ನ್ಯಾಯಪೀಠವನ್ನೇರಿ, ಮ್ಯಾಜಿಸ್ಟ್ರೇಟರ ಕೆನ್ನೆಗೆ ಹೊಡೆದರು. ನ್ಯಾಯಾಧೀಶರನ್ನು ರಕ್ಷಿಸಲು ಬಂದ ಸಿಬ್ಬಂದಿಯನ್ನು ತಳ್ಳಿ ಹಾಕಲಾಯಿತು. 'ನೀನು ಹೊರಗೆ ಬಾ, ನಿನ್ನನ್ನು ನೋಡಿಕೊಳ್ಳುತ್ತೇನೆ' ಎಂಬ ಬೆದರಿಕೆಯನ್ನು ಆಪಾದಿತ ಹಾಕಿದರು.

ನಂತರ ನ್ಯಾಯಾಧೀಶರು ಚೇಂಬರಿಗೆ ತೆರಳಿದರು. ಜಿಲ್ಲಾ ನ್ಯಾಯಾಧೀಶರು ೮-೧೧-೧೯೯೩ರಂದು ಈ ವಿಷಯವನ್ನು ರಾಜಸ್ಥಾನ ಹೈಕೋರ್ಟಿಗೆ ಬರೆದು ತಿಳಿಸಿದರು. ಹೈಕೋರ್ಟು ಇದರ ವಿಚಾರಣೆ ಮಾಡಿತು. ಆರೋಪಿತ ಅನಿರ್ಬಂಧ ಕ್ಷಮೆ ಯಾಚಿಸಿದ. ಅದನ್ನು ಹೈಕೋರ್ಟು ಸ್ವೀಕರಿಸಲಿಲ್ಲ. 'ಈ ಕ್ಷಮಾಪಣೆ, ಪ್ರಾಮಾಣಿಕವಾದುದಲ್ಲ. ಶಿಕ್ಷೆಯಿಂದ ಪಾರಾಗುವ ಉದ್ದೇಶಕ್ಕಾಗಿ ಸಲ್ಲಿಸಲಾಗಿದೆ. ಕ್ಷಮೆ ಎನ್ನುವ ಶಬ್ದ, ಆಟದ ಮೈದಾನದಲ್ಲಿ ಚೆಂಡಿನಂತೆ ಉಪಯೋಗವಾಗಿದೆ' ಎಂದು ಹೇಳಿ ಆರೋಪಿಗೆ ೬ ತಿಂಗಳು ಸಾದಾ ಶಿಕ್ಷೆ, ೨೦೦೦ ರೂಪಾಯಿ ದಂಡ ವಿಧಿಸಿತು.

'ನ್ಯಾಯದಾನ ಪದ್ಧತಿ ಕಲುಷಿತವಾಗಬಾರದು. ನ್ಯಾಯಾಲಯದ ಗೌರವಕ್ಕೆ ಯಾರಿಂದಲೂ ಧಕ್ಕೆ ಉಂಟಾಗಬಾರದು. ವ್ಯಕ್ತಿ ಎಷ್ಟೇ ದೊಡ್ಡವನಿರಲಿ, ಆತ ಯಾರೇ ಆಗಿರಲಿ, ಕಟ್ಟುನಿಟ್ಟಾದ ಕ್ರಮ ಕೈಕೊಳ್ಳಲೇಬೇಕಾಗುತ್ತದೆ' ಎಂದು ಹೈಕೋರ್ಟು ಹೇಳಿತು.

ಆಪಾದಿತ ಈ ಕೇಸನ್ನು ಸುಪ್ರೀಂ ಕೋರ್ಟಿಗೆ ಕೊಂಡೊಯ್ದ. ಸುಪ್ರೀಂ ಕೋರ್ಟು, 'ಈ ವರ್ತನೆ ಸದ್ವರ್ತನೆ, ಎನ್ನಲಾಗದು. ಆಪಾದಿತನ ಈ ವರ್ತನೆ ಸರಿಯಲ್ಲ. ಕಾನೂನನ್ನು ತಮ್ಮ ಕೈಗೆ ತೆಗೆದುಕೊಳ್ಳುವ ಇಂತಹ ಪ್ರವೃತ್ತಿಯನ್ನು ಗಂಭೀರವಾಗಿ ಪರಿಗಣಿಸಬೇಕಾಗುವದು. ನ್ಯಾಯಾಧೀಶನ ಕೆನ್ನೆಗೆ ಪೆಟ್ಟು ಕೊಟ್ಟದ್ದು, ನ್ಯಾಯಾಂಗ ಪದ್ಧತಿಗೇ ಪೆಟ್ಟು ಕೊಟ್ಟಂತೆ' ಎಂದು ಸುಪ್ರೀಂ ಕೋರ್ಟು ಹೇ:, ಕ್ಷಮೆ ಸ್ವೀಕರಿಸಲು ನಿರಾಕರಿಸಿ, ಹೈಕೋರ್ಟಿನ ಆದೇಶವನ್ನು ೧೩-೮-೨೦೦೨ ರಂದು ದೃಢೀಕರಿಸಿತು.

ಇದೆಲ್ಲ ನಡೆದುದು ನ್ಯಾಯಾಲಯ ನಿಂದನಾ ಕಾನೂನಿನ ೧೨ನೇ ಕಲಂ ಮೇರೆಗೆ. 'ಸುಪ್ರೀಂ ಕೋರ್ಟು ಆರೋಪಿತನಿಗೆ ನೀಡಿದ ಜಾಮೀನನ್ನು ರದ್ದುಪಡಿಸಿ, 'ಕೋರ್ಟಿನಲ್ಲಿ ಹಾಜರಿದ್ದ ಆಪಾದಿತನನ್ನು ಕೂಡಲೆ ಬಂಧಿಸಿ ತಿಹಾರ ಜೇಲಿಗೆ ಕಳಿಸಬೇಕು, ನಂತರ ಜೈಪುರದ ಸಂಬಂಧಿಸಿದ ಅಧಿಕಾರಿಗಳೊಂದಿಗೆ ಸಂಪರ್ಕಿಸಿ, ಹೈಕೋರ್ಟು ಆದೇಶದ ಮೇರೆಗೆ ಜೈಪುರಕ್ಕೆ ಕಳಿಸಬೇಕೆ'ಂದು ಆದೇಶಿಸಿತು.

ನ್ಯಾಯಾಲಯ ಘನತೆಯನ್ನು ರಕ್ಷಿಸಲು ೧೯೭೧ರ ನ್ಯಾಯಾಲಯ ನಿಂದನಾ ಕಾನೂನು ರಚಿತವಾಗಿದೆ. ಅದಕ್ಕೂ ಮೊದಲು ೧೯೫೨ರ ಕಾನೂನು ಜಾರಿಯಲ್ಲಿತ್ತು. ೧೯೨೬ರ ನ್ಯಾಯಾಲಯ ನಿಂದನಾ ಕಾನೂನಿನಲ್ಲಿದ್ದ ಲೋಪದೋಷ ಸರಿಪಡಿಸಿ, ೧೯೫೨ರ ಕಾನೂನನ್ನು ಮಾಡಲಾಯಿತು.

೧೯೭೧ರ ನ್ಯಾಯಾಲಯ ನಿಂದನಾ ಕಾನೂನಿನಲ್ಲಿ ೨೪ ಕಲಂಗಳಿವೆ. ಇದರ ೨೩ನೇ ಕಲಂ ಮೇರೆಗೆ, ಸುಪ್ರೀಂ ಕೋರ್ಟಿಗೆ ಮತ್ತು ಹೈಕೋರ್ಟ್‌ಗಳಿಗೆ ನಿಯಮ ರಚಿಸುವ ಅಧಿಕಾರ ಕೊಡಲಾಗಿದೆ. ಕರ್ನಾಟಕದಲ್ಲಿ, ೧೯೮೧ರ ಕರ್ನಾಟಕ ನ್ಯಾಯಾಲಯ ನಿಂದನಾ ವ್ಯವಹರಣೆ ನಿಯಮಗಳು ಜಾರಿಯಲ್ಲಿವೆ.

ನ್ಯಾಯಾಲಯ ನಿಂದನಾ ಕಾನೂನು ಇಡೀ ಭಾರತಕ್ಕೆ ಅನ್ವಯವಾಗುತ್ತದೆ. ಆದರೆ ಈ ಕಾನೂನಿನಲ್ಲಿ ಸುಪ್ರೀಂ ಕೋರ್ಟಿಗೆ ಅನ್ವಯಿಸುವ ವಿಧಿಗಳನ್ನು ಬಿಟ್ಟು, ಉಳಿದವುಗಳು ಜಮ್ಮು-ಕಾಶ್ಮೀರ ರಾಜ್ಯಕ್ಕೆ ಅನ್ವಯಿಸುವುದಿಲ್ಲ.

ನ್ಯಾಯಾಲಯ ನಿಂದನೆಯಲ್ಲಿ, ಸಿವಿಲ್ ಕಂಟೆಂಪ್ಟ, ಕ್ರಿಮಿನಲ್ ಕಂಟೆಂಪ್ಟ ಎಂದು ವರ್ಗೀಕರಣ ಮಾಡಲಾಗಿದೆ. ನ್ಯಾಯಾಲಯದ ಯಾವುದೇ ಆದೇಶ, ಆಜ್ಞಪ್ತಿ, ತೀರ್ಪು ನೀಡಿದ ಮುಚ್ಚಳಿಕೆಯ ಉಲ್ಲಂಘನೆ ಮಾಡಿದರೆ, ಅದು ಸಿವಿಲ್ ಕಂಟೆಂಪ್ಟ ಆಗುತ್ತದೆ. ನ್ಯಾಯಾಲಯದ ಅವಹೇಳನ ಮಾಡುವ, ಹಾಗೆ ಮಾಡುವ ಉದ್ದೇಶ ಹೊಂದಿದ, ನ್ಯಾಯಾಲಯದ ಬಗ್ಗೆ ಕುತ್ಸಿತ ಅಭಿಪ್ರಾಯ ಮೂಡುವಂತೆ ಮಾಡುವ, ನ್ಯಾಯಾಲಯದ ಕಾರ್ಯನಿರ್ವಹಣೆಯಲ್ಲಿ ಆತಂಕ







ಉಂಟು ಮಾಡುವಂತೆ ವರ್ತಿಸಿದರೆ, ಬರೆಹದ ಮೂಲಕ, ಚಿತ್ರ-ಚಿಹ್ನೆ ಮೂಲಕ ಅಥವಾ ಇನ್ನಾವುದೇ ರೀತಿ ನಡೆದುಕೊಂಡರೆ, ಅದು ಕ್ರಿಮಿನಲ್ ಕಂಟೆಂಪ್ಟ ಆಗುತ್ತದೆ' ಎಂದು ೨ನೇ ಕಲಂನಲ್ಲಿ ಹೇಳುತ್ತಾರೆ.

ಆದರೆ ಒಬ್ಬ ವ್ಯಕ್ತಿ ತನ್ನ ಬರೆಹ ಪ್ರಕಟವಾದಾಗ, ಸಿವಿಲ್ ಅಥವಾ ಕ್ರಿಮಿನಲ್ ವ್ಯವಹರಣೆ ನಡೆದದ್ದು ತನಗೆ ಗೊತ್ತಿಲ್ಲವೆಂದು ಸಿದ್ಧಪಡಿಸಿದರೆ, ಆತ ನ್ಯಾಯಾಲಯ ನಿಂದನಾ ಕ್ರಮಕ್ಕೆ ಗುರಿಯಾಗುವುದಿಲ್ಲವೆಂದು ೩ನೇ ಕಲಂ ಹೇಳಿದೆ. ನ್ಯಾಯಾಲಯದಲ್ಲಿ ನಡೆದ ವ್ಯವಹರಣೆಯ ಪ್ರಾಮಾಣಿಕ ವರದಿ, ನ್ಯಾಯಾಲಯದ ನಿಂದನೆಯಲ್ಲ. ತೀರ್ಮಾನವಾದ ಮೊಕದ್ದಮೆಯ ಸೂಕ್ತ ವಿಶ್ಲೇಷಣೆ, ನ್ಯಾಯಾಲಯ ನಿಂದನೆಯಲ್ಲ, ಕೆಳ ನ್ಯಾಯಾಲಯದ ನ್ಯಾಯಾಧಿಕಾರಿಯ ಬಗ್ಗೆ ಮೇಲಿನ ನ್ಯಾಯಾಲಯಕ್ಕೆ ಅಥವಾ ಹೈಕೋರ್ಟಿಗೆ, ಸದ್ಭಾವನೆಯಿಂದ ಮಾಡಿದ ಹೇಳಿಕೆ, ನ್ಯಾಯಾಲಯ ನಿಂದನೆಯಾಗದು.

ಗುಪ್ತ ವಿಚಾರಣೆಯ ಅಥವಾ ನ್ಯಾಯಾಧೀಶರ ಕೊಠಡಿಯಲ್ಲಿ ನಡೆದ ವಿಚಾರಣೆಯ ಬಗ್ಗೆ ಬರೆದರೆ, ಅದು ನ್ಯಾಯಾಲಯ ನಿಂದನೆಯಲ್ಲ. ಆದರೆ ಅಂಥ ಪ್ರಕಟಣೆ ಯಾವದೇ ಕಾನೂನಿನ ಮೇರೆಗೆ ನಿರ್ಬಂಧಿಸಿರಬಾರದು, ಅಥವಾ ನ್ಯಾಯಾಲಯವೇ 'ಇಂಥ ವರದಿ ಪ್ರಕಟಿಸಬಾರದು' ಎಂದು ನಿರ್ಬಂಧಿಸಿರಬಾರದು. ಗುಪ್ತ ವಿಚಾರಣೆ ಮಾಡುತ್ತಿದ್ದಾಗ, ರಾಜ್ಯದ ಹಿತಾಸಕ್ತಿ ರಕ್ಷಣೆಗಾಗಿ ಅಂಥ ಪ್ರಕಟನೆ ನಿರ್ಬಂಧಿಸಿರಬಾರದು.

ಹೈಕೋರ್ಟುಗಳು, ತಮ್ಮ ನಿಂದನೆಯಾದಾಗ ಅಥವಾ ಅಧೀನ ನ್ಯಾಯಾಲಯಗಳ ನಿಂದನೆ ಆದಾಗ, ಅದನ್ನು ವಿಚಾರಿಸಿ, ದಂಡನೆ ನೀಡಬಹುದು.

ನ್ಯಾಯಾಲಯದ ನಿಂದನೆ ಆಗಿದೆ ಎಂದು ಸಿದ್ಧವಾದರೆ, ೬ ತಿಂಗಳವರೆಗೆ ಸಾದಾ ಶಿಕ್ಷೆ, ೨೦೦೦ ರೂ. ವರೆಗೆ ದಂಡ ವಿಧಿಸಬಹುದಾಗಿದೆ. ಆದರೆ ಆಪಾದಿತ ಕ್ಷಮೆ ಕೇಳಿದರೆ, ಅದು ಸಮಾಧಾನಕರವೆನ್ನಿಸಿದರೆ, ಕೋರ್ಟು ಕ್ಷಮೆ ಸ್ವೀಕರಿಸಬಹುದು. ಶಿಕ್ಷೆ ಆಗಿದ್ದರೆ, ಅದನ್ನು ಮನ್ನಾ ಮಾಡಬಹುದು.

ಹೈಕೋರ್ಟು ಅಥವಾ ಸುಪ್ರೀಂ ಕೋರ್ಟಿನ ಸಮ್ಮುಖದಲ್ಲಿಯೇ ನ್ಯಾಯಾಲಯ ನಿಂದನೆ ಆಗಿದೆ ಎನ್ನಿಸಿದರೆ, ನ್ಯಾಯಾಲಯ ಆತನನ್ನು ಅಲ್ಲಿಯೇ ಬಂಧಿಸಲು ಆದೇಶ ನೀಡಬಹುದು. ಆತನಿಗೆ ನೋಟೀಸು ನೀಡಿ, ರಕ್ಷಣೆಗೆ ಅವಕಾಶ ನೀಡಿ, ಅದನ್ನು ತೀರ್ಮಾನಿಸಬಹುದು. ಇದೀಗ ಹೇಳಿದ್ದನ್ನುಳಿದು, ಇತರ ಕ್ರಿಮಿನಲ್ ಕಂಟೆಂಪ್ಟ ಬಗ್ಗೆ ಸುಪ್ರೀಂ ಕೋರ್ಟು ಅಥವಾ ಹೈಕೋರ್ಟು ತಾನಾಗಿಯೇ ಕ್ರಮ ಕೈಕೊಳ್ಳಬಹುದು. ಅದಕ್ಕೆ ಅಡ್ವೋಕೇಟ್ ಜನರಲ್ ಅರಿಕೆ, ಅಥವಾ ಅಡ್ವೋಕೇಟ್ ಜನರಲ್‌ರ ಲಿಖಿತ ಅನುಮತಿ ಪಡೆದು ಬೇರೆ ಯಾರಾದರೂ ಮಾಡಿದ ಅರಿಕೆ, ಕೆಳಕೋರ್ಟಿನಿಂದ ಬಂದ ಅರಿಕೆ ಮೇಲೆ ಕ್ರಮ ಕೈಕೊಳ್ಳಬಹುದು.

ನ್ಯಾಯಾಧೀಶರು, ನ್ಯಾಯಿಕ ಸ್ಥಾನದಲ್ಲಿದ್ದ ಇನ್ನಾರೇ ವ್ಯಕ್ತಿ, ತನ್ನ ನ್ಯಾಯಾಲಯದ ನಿಂದನೆ ತಾನೇ ಮಾಡಿದ್ದಕ್ಕೆ ನಿಂದನೆಗೆ ಗುರಿಯಾಗಬಹುದೆಂದು ೧೬ನೇ ಕಲಂ ಹೇಳುತ್ತದೆ. ಆದರೆ ನ್ಯಾಯಾಧೀಶರು, ಮೇಲ್ಮನವಿ, ಪುನರ್ವಿಮರ್ಶಾ ಅರ್ಜಿಯಲ್ಲಿ ಕೆಳಕೋರ್ಟುಗಳ ಬಗ್ಗೆ ಉಲ್ಲೇಖಿಸಿದ ಯಾವುದೇ ಅಭಿಪ್ರಾಯ, ಟೀಕೆ, ನ್ಯಾಯಾಲಯ ನಿಂದನೆಯಾಗದು. ಕ್ರಿಮಿನಲ್ ಕಂಟೆಂಪ್ಟ ಕೇಸಿನಲ್ಲಿ ಇಬ್ಬರು ನ್ಯಾಯಾಧೀಶರು ವಿಚಾರಣೆ ನಡೆಸುವರು. ಇದರ ಮೇಲೆ ಸುಪ್ರೀಂ ಕೋರ್ಟಿಗೆ ಮೇಲ್ಮನವಿ ಇದೆ. ಒಬ್ಬ ನ್ಯಾಯಾಧೀಶನ ತೀರ್ಮಾನವಿದ್ದರೆ, ಅದೇ ಹೈಕೋರ್ಟಿನ ಇಬ್ಬರು ನ್ಯಾಯಾಧೀಶರಿದ್ದ ನ್ಯಾಯಪೀಠಕ್ಕೆ ಮೇಲ್ಮನವಿ ಸಲ್ಲಿಸಬಹುದು.

ನ್ಯಾಯಾಲಯ ನಿಂದನಾ ಅರ್ಜಿ ಸಲ್ಲಿಸಲು ಕಾಲಮಿತಿ ಇದೆ. ನ್ಯಾಯಾಲಯ ನಿಂದನೆಯ ಘಟನೆಯಾದ ೧ ವರ್ಷದ ನಂತರ ಇಂಥ ಅರ್ಜಿ ಸಲ್ಲಿಸಲಾಗದು.

ಕರ್ನಾಟಕ ಹೈಕೋರ್ಟು ರಚಿಸಿದ ನಿಯಮಗಳಲ್ಲಿ ೨೧ ನಿಯಮಗಳಿವೆ; ಅಲ್ಲದೆ ೫ ನಮೂನೆಗಳಿವೆ.

ನ್ಯಾಯಾಲಯ ನಿಂದನೆ ಕಾನೂನಿನ ಉದ್ದೇಶ, ನ್ಯಾಯಾಲಯದ ಘನತೆಯನ್ನು ಕಾಪಾಡುವದಕ್ಕಾಗಿದೆ. ವಕೀಲರು ನ್ಯಾಯಾಂಗದ ಅಧಿಕಾರಿ. ವಕೀಲರು ವಾದ ಮಂಡಿಸುತ್ತಾರೆ. ನ್ಯಾಯಾಧೀಶರು ವಾದ ಕೇಳಿ ತೀರ್ಪು ಕೊಡುತ್ತಾರೆ. ಒಬ್ಬ ಕಕ್ಷಿದಾರ, ಎದುರು ಪಕ್ಷದ ವಕೀಲರಿಗೆ ಅವಹೇಳನಕಾರಿ ಮಾತು ಹೇಳುವುದು ನ್ಯಾಯಾಲಯದ ನಿಂದನೆ. 'ಇಂಥ ಆರೋಪಿಯ ರಕ್ಷಣೆ ನೀವು ಮಾಡಬೇಡಿ' ಎಂದು ವಕೀಲನ ಮೇಲೆ ಒತ್ತಡ ತರುವುದು, ನ್ಯಾಯಾಲಯ ನಿಂದನೆ ಆಗುತ್ತದೆ. ಕೋರ್ಟು ನೇಮಿಸಿದ ಕಮೀಶನರ್‌ರ ಕೆಲಸಕ್ಕೆ ಆತಂಕ ಮಾಡುವುದು ನ್ಯಾಯಾಲಯ ನಿಂದನೆ ಆಗುತ್ತದೆಂದು ಕೋರ್ಟುಗಳು ತೀರ್ಪಿತ್ತಿವೆ.

ನ್ಯಾಯಾಲಯ ನಿಂದನಾ ಕಾನೂನಿನಲ್ಲಿ ಬದಲಾವಣೆ ಆಗಬೇಕೆಂದು ಒಂದು ಅಭಿಪ್ರಾಯವಿದೆ. ಆ ವಿಚಾರ ಸಂಸತ್ತಿಗೆ ಸೇರಿದ್ದು. 'ನ್ಯಾಯಾಂಗದ ಪಾವಿತ್ರ್ಯ ರಕ್ಷಣೆಗಾಗಿ ಮಾಡಿದ ಕಾನೂನು, ಜನರು ನ್ಯಾಯಾಂಗಕ್ಕೆ ಗೌರವ ಸಲ್ಲಿಸುವಂತಾಗಬೇಕು, ಅದರ ಉಲ್ಲಂಘನೆಯಾದರೆ, ಕ್ರಮ ಕೈಕೊಳ್ಳಲಾಗುವದು' ಎಂದು ಕಾನೂನು ಹೇಳುತ್ತದೆ. ನ್ಯಾಯವಾದಿಗಳು, ನ್ಯಾಯಧೀಶರು, ಕಕ್ಷಿದಾರರು ಎಲ್ಲರೂ ಸೇರಿ ನ್ಯಾಯಾಂಗದ ಘನತೆಯನ್ನು ಎತ್ತಿ ಹಿಡಿಯಬೇಕು. ನ್ಯಾಯಾಂಗದ ಘನತೆ ಕುಸಿದರೆ, ಪ್ರಜಾಪ್ರಭುತ್ವಕ್ಕೆ ಅಪಾಯ. ○

ಆತ್ಮಗಳು ಮಲಗಿರುವ ಮತ್ತು ದೇಹಗಳು ದಾರಿ ತಪ್ಪಿರುವ ಮನಸ್ಸುಗಳಲ್ಲಿ ಆತ್ಮ ಮತ್ತು ದೇಹಗಳ ಜಗಳವೇ ಇರುವುದಿಲ್ಲ.
-ಖಲೀಲ್ ಗಿಬ್ರಾನ್



# DENIAL OF EQUAL RIGHT TO WOMAN

**A.C. Sivalingappa,** # 878, 5th cross, 9th main, BTM Layout II Stage, Bangalore - 76

No one who knows the history of this country would fail to recognise that each of them is unprecedented in its own way. Why in this country alone? In no country has a woman been easily granted freedom, nor has she ever enjoyed it in actual fact. In the male - dominated society like ours it is not surprising if the idea of woman's freedom has been pooh poohed. No doubt every prophet and law - giver of the world was born the son of woman; yet has he given only a secondary place to woman in the acheme of things that he propounded in his religion. There is no poet of the world but was born of the womb of woman. Yet did he deny her equality with man.

In the western world, she as EVE, has been the cause of Man's mythical fall and since then the source of 'Original SIN'. Even the greatest of philosophers have lent countenance to this view of woman being subordinate to man, never his equal. Plato, the great philosopher of ancient Greece thanked god that he was created man, not woman. Didn't Shakspear exclaim-Frailty, thy name is women.

We have an analogous verse in the Bagavad Geeta in chapter IX, Verse 32, woman is ascribed the status of the SHUDRA (the lowest of the low in society) of those born in sin.

Woman whatever the caste in which she happened to have been born is a SHUDRA. The scripters, where they mention woman, do not give a description of her caste and status, as they do in the case of man: they seem to think there is no need, for isn't she, by birth a SHUDRA?

Ms. Brinda Karat, general secretary, All India Democratic Women's Association has said that the concept of Hindutva promoted by the BJP will only prove to be a disaster for women.

The hindutva philosophy was anti-women in all respects for it meant compelling women to accept an inferior status in society. (Published in 'The Hindu')

A three day conference was held in Damascus on Saturday the 1st February 2003 by file photos (1) Fatima Khaled Ahmed al - Bashir, wife of the Sudanese President (2) Queen Rania, JORDAN, (3) Asma Assad, wife of the Syrian Leader Basha Assad (4) Sabyka Al Khalifa, wife of the Bahrain King and (5) Andreh Lahoud, wife of the Lebanese President. This conference is on the status of women in the Arab World that encourages women to broaden their horizons. (Ref: The Hindu on 3.2.2003)

The world fame LORD BASAVESWARA who was born in 1131.A.D. in Karnataka, had made revolutionary reforms in Lingayat Religion and in the society. He, as a Prime Minister in the rule of King Bijjala at Kalyan in Karnataka had conducted 43-marriages for the young childless widows in order to avoid them from becoming victims of the prostitution. He had also brought thousands of women who were engaged in prostitution to "ANUBHAVA MANTAPA" (Spiritual Forum) at Kalyan, obsorbed them in Lingayat Religion and provided them suitable profession to lead a decent family life in the society.

Unlike wearing JANIVARA (Sacred Thread) by men alone, the women in Lingayat Religion are given equal right to wear "ISHTALINGA" (God Head Of Shiva) on their body and worship it like men.

It is a bounden duty of all Governments in the world to provide equal rights to women in Religion and in society.

I hope that the world would appreciate the philosophy of LORD BASAVESWARA and follow his reforms to lift women equal to men in all respects.





# ನಾವು ಕಾನೂನಿನ ಪಕ್ಷ - ದೇವರು ನಮ್ಮ ಪಕ್ಷ

**ಟಿ. ನಾಗಪ್ಪ,** ಪ್ರಧಾನ ಸಿವಿಲ್ ಜಡ್ಜ್, (ಹಿರಿಯ ವಿಭಾಗ)

ಕಾನೂನನ್ನು ಜನರಿಗೆ ತಿಳಿಯದ ಹಾಗೆ ಬರೆದಿಡುವ ಹಾಗೂ ಬರೆದದ್ದನ್ನು ಅರ್ಥೈಸುವ ಕಾಲವೊಂದಿತ್ತು. ಆದರೆ ಕಾನೂನನ್ನು ಜನಸಾಮಾನ್ಯರೇ ತಿಳಿಯುವ ಹಾಗೆ ರಚಿಸಬೇಕು ಹಾಗೂ ಇದ್ದ ಕಾನೂನುಗಳನ್ನು ಅವರಿಗೆ ತಿಳಿಹೇಳಬೇಕು ಎನ್ನುವ ಹೊಸ ಅಲೆ ಇತ್ತೀಚೆಗೆ ಬಂದ ಕಾರಣ ಲೇಖನ. ಹಾಗಾದರೆ ಕಾನೂನು ಹಾಗೂ ನ್ಯಾಯದಾನ ಎಂದರೆ ಏನು?

ನಿಜವಾದ ಕಾನೂನು ಎಂದರೆ ಟಿ.ವಿ. ಹಾಗೂ ಸಿನಿಮಾಗಳಲ್ಲಿ ತೋರಿಸುವ ಕಾನೂನು ಖಂಡಿತವಾಗಿಯೂ ಅಲ್ಲ. ಹಾಗಾದರೆ ನಿಜವಾಗಿ ಕಾನೂನು ಹಾಗೂ ನ್ಯಾಯದಾನ ಎಂದರೆ ಏನು?

ಇಂಗ್ಲಿಷ್‌ನಲ್ಲಿ "Without law civilization dies" ಎನ್ನುವ ಮಾತೊಂದಿದೆ.

ಇದರ ಅರ್ಥ - "ಕಾನೂನು ಇಲ್ಲದಿದ್ದರೆ ನಾಗರೀಕತೆ ನಶಿಸುತ್ತದೆ" ಎಂದಾಗುತ್ತದೆ.

> ನಾವೆಲ್ಲ ದೇಗುಲದ ಬಾಗಿಲ ಬಳಿ ನಿಂತಿರುವ ಭಿಕ್ಷುಕರು. ದೊರೆ ದೇಗುಲಕ್ಕೆ ಬಂದು ಹೋಗುವಾಗ ಅವನ ಸಂಪತ್ತಿನ ಭಾಗವನ್ನು ಪಡೆಯುತ್ತೇವೆ. ಆದರೆ ನಮ್ಮಲ್ಲಿ ಪರಸ್ಪರ ಅಸೂಯೆಯಿದೆ. ಇದು ದೊರೆಗೆ ಮಾಡುವ ಅವಮಾನದ ಇನ್ನೊಂದು ವಿಧಾನ. -ಖಲ್ವೀಲ್ ಗಿಬ್ರಾನ್

ಕಾರಣ ಕಾನೂನು ಹಾಗೂ ನ್ಯಾಯದಾನ-ಪದಗಳ ಬಹಳ ಸರಳವಾದ ವ್ಯಾಖ್ಯಾನವೆಂದರೆ-

*"ಸಮಾಜದಲ್ಲಿಯ ಒಳ್ಳೆಯ ನಡತೆಯೇ ಕಾನೂನು*
*ಹಾಗೂ ನಡತೆಯಲ್ಲಿ ಸತ್ಯವೇ ನ್ಯಾಯದಾನ."*

ಕಾನೂನನ್ನು ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ -

"ಶಾಸನರೂಪದಲ್ಲಿ ಪ್ರಭುತ್ವ ವಿಧಿಸುವ ಪರಮಾದೇಶ; ಅದರ ಉಲ್ಲಂಘನೆಗೆ ಶಿಕ್ಷೆ ಇರಬೇಕು"

ಸಿವಿಲ್ ವ್ಯಾಜ್ಯಗಳಲ್ಲಿ ಆದ ಅನ್ಯಾಯಕ್ಕೆ ಪರಿಹಾರ ನೀಡಲಾಗುತ್ತದೆ. ಆದರೆ ಪರಿಹಾರ ಕೇಳುವ ಜನರೇ ವಿರಳ. ಇದು ವಿಷಾದದ ಸಂಗತಿ, ಆ ಮಾತು ಬೇರೆ. ನ್ಯಾಯಾಂಗದ ಶುಲ್ಕವನ್ನು ಕೊಡಬೇಕಾಗುತ್ತದೆ. ಯಾರಿಗೆ ನ್ಯಾಯಾಂಗದ ಶುಲ್ಕವನ್ನು ಕೊಡಲು ಶಕ್ಯವಿಲ್ಲವೋ ಅಂಥವರಿಗೆ ಪ್ರಾಧಿಕಾರ ಕಾನೂನಿನ ನೆರವನ್ನು ನೀಡುತ್ತದೆ ಹಾಗೂ ವ್ಯಾಜ್ಯದಲ್ಲಿ ಅವರು ಯಶಸ್ವಿಯಾದಾಗ ಆ ಶುಲ್ಕವನ್ನು ಮರಳಿ ಕೊಡಬೇಕಾಗುತ್ತದೆ. ಆದ್ದರಿಂದ ಪರಿಹಾರವನ್ನು ಕೇಳಿ ತಮಗೆ ಆದಂತಹ ಅನ್ಯಾಯಗಳನ್ನು ಸರಿಪಡಿಸಿಕೊಳ್ಳಬೇಕೆಂದು ಈ ಸಂದರ್ಭದಲ್ಲಿ ಜನತೆಯಲ್ಲಿ ಕೇಳಿಕೊಳ್ಳುವೆ.

ಕಾನೂನಿನ ಬಗ್ಗೆ ಒಬ್ಬ ಇಂಗ್ಲಿಷ್ ತತ್ವಜ್ಞಾನಿ ಹೀಗೆ ಹೇಳಿದ್ದಾನೆ-

"God's blood is Law for man's sake"

ಇದರ ಅರ್ಥ "ಮಾನವನ ರಕ್ಷಣೆಗಾಗಿ ಭಗವಂತನ ರಕ್ತವೇ ಕಾನೂನು" ಎಂದಾಗುತ್ತದೆ. ಮತ್ತೊಬ್ಬ ತತ್ವಜ್ಞಾನಿ ಕಾನೂನಿನ ಬಗ್ಗೆ ಹೇಳಿದ ಮಾತು ಬಹಳ ಮಹತ್ವಪೂರ್ಣದ್ದಾಗಿದೆ. ಅದೇನೆಂದರೆ-

"Law governs man and reason the Law"- ಇದರ ಅರ್ಥ "ಶಾಸನ ಮನುಷ್ಯನನ್ನು ಆಳಿದರೆ, ಮನುಷ್ಯನ ಪರಿಜ್ಞಾನ, ಶಾಸನವನ್ನೇ ಆಳುತ್ತದೆ" ಎಂದಾಗುತ್ತದೆ.

ಇದನ್ನೇ ವರಕವಿ ದ.ರಾ. ಬೇಂದ್ರೆಯವರು ತಮ್ಮ ಒಂದು ಕವನದಲ್ಲಿ ಬಹು ಸುಂದರವಾಗಿ ಹೇಳಿದ್ದಾರೆ-

ಅದೇನೆಂದರೆ - "ಹೊರಗಿನ ದೇವರೇಕೆ? ಒಳದೈವಕೆ ಕಿವಿಗೊಡು" ಎಂದು.

೧೬೦೮ರಲ್ಲಿ ಲಾರ್ಡ್ ಕೋಕ ಎನ್ನುವವರು ನೈತಿಕ ಕಾನೂನಿನ ಬಗ್ಗೆ ಹೀಗೆ ಹೇಳುತ್ತಾರೆ-

"ಈ ವಿಶ್ವದಲ್ಲಿ ಕಾನೂನು ಎನ್ನುವ ಪದವನ್ನು ಮೊಟ್ಟಮೊದಲು ಬಳಸಿದ ವ್ಯಕ್ತಿ ಮೊಸೆಸ್ ಎಂದು ಹೇಳುತ್ತಾರೆ. ಅದಕ್ಕಿಂತಲೂ ಆದಿಯಲ್ಲಿ ಭಗವಂತ ಮಾನವನನ್ನು ಸೃಷ್ಟಿಸುವಾಗ ತನ್ನ ಬೆರಳಿನಿಂದ ಅವನ ಹೃದಯದಲ್ಲಿ ಬರದದ್ದೇ ನೈತಿಕ ಕಾನೂನು."

ವಿಶ್ವದ ಎಲ್ಲ ಧರ್ಮಗಳು ಹೇಳುವ ಮಾತೊಂದು ಇದೆ. ಅದೇನೆಂದರೆ-"ಸತ್ಯವೇ ದೇವರು"

ನಾವು, ಒಳದೈವಕ್ಕೆ ಕಿವಿಗೊಡದೆ, ಸತ್ಯವನ್ನು ಬಿಟ್ಟು ನಡೆದಾಗ, ಸಮಾಜದಲ್ಲಿ ಕಾನೂನಿನ ಉಲ್ಲಂಘನೆ ಹಾಗೂ ಅನ್ಯಾಯಗಳು ಜರುಗುತ್ತವೆ.

ಶರಣರು, ಸಂತರು-ನುಡಿದಂತೆ ನಡೆಯಲಿಲ್ಲ; ನಡೆದಂತೆ ನುಡಿದರು.

ನಾವುಗಳು ನಡೆದಂತೆ ನುಡಿಯುವುದು-ದೂರದ ಮಾತು; ನುಡಿದಂತೆಯೂ ನಡೆಯುವುದಿಲ್ಲ.

ಒಂದು ಕಾಲದಲ್ಲಿ ಜನಪದ ಸಾಹಿತ್ಯದಲ್ಲಿ ಹೀಗೆ ಹಾಡಿ ಹರಸಿದ್ದಾರೆ. ಅದೇನೆಂದರೆ:

*"ಕಲ್ಲು ಮುಳ್ಳಿದ್ದರೆ ಹುಲ್ಲಂತ ತುಳಿದೇವು*
*ಸೊಲ್ಲೇರಿಸಿ ಹಾಡಿ ನಲಿದೇವು*
*ಶಿವನೆ ಸುಳ್ಳಾಡೆವು ದಾರಿ ಬಿರುಸಂತ"*

ಈ ರೀತಿ ಸತ್ಯಕ್ಕೆ ಗೌರವ ಕೊಡುವ ಕಾಲವೊಂದಿತ್ತು. ಆದರೆ ಇಂದಿನ ನಮ್ಮ ಜೀವನ ಬರಿ ಸುಳ್ಳು ಮೋಸಗಳ ಮಧ್ಯೆ ಅನ್ಯಾಯ ದೊಂದಿಗೆ ರಾಜಿ ಮಾಡಿಕೊಳ್ಳುತ್ತಲೇ ನಡೆದಿದೆ ಎಂದು ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಒಂದೆಡೆ ಹೇಳಿದ್ದಾರೆ. ಇವರಾಡುವುದು ಸತ್ಯವಿರಬಹುದೆ?

೧. ಭಿಕ್ಷುಕ : ಅಮ್ಮಾ, ಊಟಮಾಡದೆ ಎರಡು ವಾರಗಳಾದವು.

೨. ಕ್ಷೌರಿಕ : ಆಯಿತು, ಇನ್ನು ಎರಡೇ ನಿಮಿಷ.

೩. ಪೂಜಾರಿ : ದೇವರ ಹೆಸರಿನಲ್ಲಿ ಕಾಣಿಕೆ ನೀಡಿ.

೪. ಡಾಕ್ಟರ್ : ಹೆದರುವ ಕಾರಣವಿಲ್ಲ, ಎಲ್ಲ ಸರಿಹೋಗುತ್ತೆ.

೫. ಅಂಗಡಿಕಾರ : ಈ ದರದಲ್ಲಿ ಈ ವಸ್ತು ನಿಮಗೆ ಬೇರೆಲ್ಲೂ ಸಿಗವುದಿಲ್ಲ.

೬. ಸಂಪಾದಕ : ಬರುವ ಸಲ ನಿಮ್ಮ ಲೇಖನವನ್ನು ಪ್ರಕಟಿಸುವೆ.

೭. ದರ್ಜಿ : ನಾಳೆ ನಿಮ್ಮ ಅಂಗಿ ಕೊಡುತ್ತೇನೆ.

೮. ಕಂಡಕ್ಟರ್ : ಹೆಚ್ಚು ಹೊತ್ತು ನಿಲ್ಲದು, ಐದು ನಿಮಿಷದಲ್ಲಿ ಹೊರಡುತ್ತೆ.

೯. ಅತಿಥಿ : ಬೇಡ, ಬೇಡ, ಈಗ ತಾನೆ ತಿಂಡಿ ಆಯಿತು.

೧೦. ಜ್ಯೋತಿಷಿ : ಈ ತಿಂಗಳು ನಿಮಗೆ ಕೆಟ್ಟಿದ್ದರೆ ಮುಂದೆ ಸರಿ ಹೋಗುತ್ತೆ.

೧೧. ಪತಿ : ಆಫೀಸಿನಲ್ಲಿ ತುಂಬಾ ಕೆಲಸವಿದ್ದುದರಿಂದ ಹೊತ್ತಾಗಿ ಹೋಯಿತು.

೧೨. ಪತ್ನಿ : ಪಕ್ಕದಮನೆಗೆ ಹೋಗಿ ಐದೇ ನಿಮಿಷದಲ್ಲಿ ಬರ್ತೀನಿ.

ಈ ಎಲ್ಲಾ ಜನರು ಸುಳ್ಳನ್ನೇ ಆಡಿ ಸುಖವಾಗಿ ಬದುಕುತ್ತಿರುವಾಗ ನಾನೊಬ್ಬನೇಕೆ ಸತ್ಯವನ್ನು ಆಡಿ ಕಷ್ಟವನ್ನು ಅನುಭವಿಸಲಿ ಎಂದು ಅಪರಾಧ ಮಾಡಿದ ವ್ಯಕ್ತಿ, 'ಮಾಡಿಲ್ಲ' ಎಂದು ಕೂಡಲೇ ಅವನು ನಿಜವಾಗಿ ಅಪರಾಧವನ್ನು ಮಾಡಿದನೇ? ಇದು ತನಿಖೆಯ ವಿಷಯವಾಗುತ್ತದೆ.

ಕಾನೂನಿನ ತನಿಖೆ ಪ್ರಾರಂಭವಾದ ಕೂಡಲೇ-ತನಿಖೆಯ ಅಂಶಗಳ ವಿಚಾರಣೆ ಪ್ರಾರಂಭ:

ಅಪರಾಧ ಯಾರು ಮಾಡಿದರು ?
ಅಪರಾಧ ಯಾರಿಗೆ ಮಾಡಿದರು?
ಅಪರಾಧ ಯಾಕೆ ಮಾಡಿದರು?
ಅಪರಾಧ ಯಾವ ಸ್ಥಳದಲ್ಲಿ ಮಾಡಿದರು?
ಅಪರಾಧ ಯಾವ ಸಮಯದಲ್ಲಿ ಮಾಡಿದರು?
ಅಪರಾಧ ಯಾವ ರೀತಿ ಮಾಡಿದರು?

ಈ ಎಲ್ಲಾ ಪ್ರಶ್ನೆಗಳು ಯಾವ ಆಧಾರದ ಮೇಲೆ ನಿರ್ಣಯವಾಗುತ್ತವೆ ಎಂದರೆ-

೧. ಅನುಮಾನ (Suspicion)

೨. ಸಾಕ್ಷಿ (Oral statements on oath)

೩. ದಸ್ತಾವೇಜು (Documentary evidence)

ಅನುಮಾನದ ಮೇಲೆ ಖಂಡಿತ ನ್ಯಾಯಾಲಯಗಳು ತಮ್ಮ ನಿರ್ಣಯಗಳನ್ನು ನಿರ್ಧರಿಸುವುದಿಲ್ಲ. ಆದರೆ ಅನುಮಾನ, ಪೊಲೀಸರ ತನಿಖೆಯಲ್ಲಿ, ಯಾವಾಗಲೂ ಮೊದಲನೆಯ ಹೆಜ್ಜೆ ಎನ್ನುವುದನ್ನು ಮರೆಯುವಂತಿಲ್ಲ. ಪೊಲೀಸರು ತಮ್ಮ ತನಿಖೆ ಮುಗಿದ ನಂತರ ನ್ಯಾಯಾಲಯಕ್ಕೆ ವರದಿಯನ್ನು ಸಲ್ಲಿಸುತ್ತಾರೆ. ತನಿಖೆಯ ವೇಳೆಯಲ್ಲಿ ಅನುಮಾನಿತರನ್ನು ದಸ್ತಗಿರಿ ಮಾಡಲು ಅವರಿಗೆ ಅಧಿಕಾರವಿದೆ.

೧) ಆದರೆ ಯಾವ ಕಾರಣಕ್ಕಾಗಿ ದಸ್ತಗಿರಿ ಮಾಡಲಾಯಿತು ಎನ್ನುವುದನ್ನು ದಸ್ತಗಿರಿಯಾದವನಿಗೆ ತಿಳಿಸಬೇಕು.

೨) ಬಂಧು ಬಳಗ ಅಥವಾ ಗೆಳೆಯರಿಗೆ ದಸ್ತಗಿರಿ ಬಗ್ಗೆ ತಿಳಿಸಬೇಕು.

೩) ತಮಗೆ ವಕೀಲರ ಸಹಾಯ ಬೇಕಿದ್ದರೆ ಅದಕ್ಕೂ ಅನುಕೂಲ ಮಾಡಿಕೊಡಬೇಕು.

> ಮಾನವ ನಿರ್ಮಿತ ಕಾನೂನುಗಳನ್ನು ಮುರಿಯುವವರು ಒಬ್ಬ ಮೂರ್ಖ; ಮತ್ತೊಬ್ಬ ಬುದ್ಧಿವಂತ ಮಾತ್ರ. ಅವರಿಬ್ಬರು ಭಗವಂತನ ಹೃದಯಕ್ಕೆ ಅತ್ಯಂತ ಹತ್ತಿರವಾಗಿದ್ದಾರೆ.
> -ಖಲೀಲ್ ಗಿಬ್ರಾನ್

೪) ಅನಾವಶ್ಯಕವಾಗಿ ಕೈಗೆ ಬೇಡಿಯನ್ನು (Hand Cuff) ಹಚ್ಚಬಾರದು ಅಥವಾ ಕೈ ಕೋಳವನ್ನು ತೊಡಿಸಬಾರದು; ಮತ್ತು

೫) ದಸ್ತಗಿರಿ ಮಾಡಿದ ವೇಳೆಯಿಂದ ೨೪ ಗಂಟೆಯೊಳಗೆ ನ್ಯಾಯಾಧೀಶರ ಮುಂದೆ ಹಾಜರುಪಡಿಸಬೇಕು.

ಪೊಲೀಸರ ವರದಿಯನ್ನು ಆಧರಿಸಿ ನ್ಯಾಯಾಧೀಶರು ವಿಚಾರಣೆ ಕಾಲಕ್ಕೆ 'ಆರೋಪಿಗೆ ತಪ್ಪು ಮಾಡಿದ್ದೀಯಾ?' ಎಂದು ಕೇಳುವ ಹಂತ (Stage) ಬರುತ್ತದೆ. ಹಾಗೆ ಆ ಹಂತದಲ್ಲಿ ನ್ಯಾಯಾಧೀಶರೊಬ್ಬರು ಕೇಳಿದ ಪ್ರಶ್ನೆಗೆ ಒಬ್ಬ ಆರೋಪಿ ಈ ರೀತಿ ಉತ್ತರಿಸಿದನಂತೆ:

"ತಡೆಯಿರಿ ಸರ್, ಸಾಕ್ಷಿಗಳು ಏನನ್ನು ಹೇಳುತ್ತವೆ ಎನ್ನುವುದನ್ನು ಕೇಳಿದ ಮೇಲೆ ತಮಗೆ ಉತ್ತರ ಹೇಳುವೆ"

ಸರ್ವೇ ಸಾಧಾರಣ ಯಾವ ಆರೋಪಿಯೂ ತಪ್ಪನ್ನು ಒಪ್ಪಿಕೊಳ್ಳುವುದಿಲ್ಲ. ಒಪ್ಪಿಕೊಳ್ಳಬೇಕೆಂದು ಕಾನೂನು ನಿರ್ದೇಶಿಸುವು





ದಿಲ್ಲ. ವಿಚಾರಣೆ ಪ್ರಾರಂಭವಾಗುತ್ತದೆ. ನ್ಯಾಯಾಲಯಗಳಲ್ಲಿ ಮೌಖಿಕ ಸಾಕ್ಷಿಗಿಂತ ದಸ್ತಾವೇಜಿನ ಸಾಕ್ಷ್ಯಕ್ಕೆ ಹೆಚ್ಚಿನ ಮಹತ್ವ. ದಸ್ತಾವೇಜಿನಲ್ಲಿ ನಮೂದಿಸಿದ ವಿಷಯಗಳ ಬಗ್ಗೆ ಮೌಖಿಕ ಸಾಕ್ಷಿಯನ್ನು ಅಂಗೀಕರಿಸಲಾಗುವುದಿಲ್ಲ.

ವಿವಾಹವಾದ ಗಂಡ-ಈ ಹೆಂಡತಿ ಯಾರು ಗೊತ್ತಿಲ್ಲ ಎಂದಾಗ ವಿವಾಹದ ಸಮಯದಲ್ಲಿ ತೆಗೆದ ಫೋಟೋ ತೋರಿಸಿ-ಇವಳು ಯಾರು? ಎಂದರೆ, 'ಗೊತ್ತಿಲ್ಲ' ಎಂದು ಹೇಳುತ್ತಾನೆ. ಹೋಗಲಿ, ಕೊನೆಯಲ್ಲಿ ನೀನು ಯಾರು? ಎಂದು ಕೇಳಿದರೆ, ಹೌದು ನೋಡಿ ಸಾರ್, ಅಂದ ಹಾಗೆ ನಾನು ಯಾರು? ಎಂದು ಕೇಳುವ ದಿನಗಳು ಸಹ ದೂರವಿಲ್ಲ ಎನಿಸುತ್ತದೆ.

ಇಂತಹ ಸಾಕ್ಷಿಗಳ ಆಧಾರದ ಮೇಲೆ ವಂಚಿತರಿಗೆ ನ್ಯಾಯದಾನ ನೀಡುವುದು ಎಷ್ಟು ಕಷ್ಟಕರ ನೀವೇ ಯೋಚಿಸಿ.

ಸಿವಿಲ್ ವ್ಯಾಜ್ಯಗಳಲ್ಲಿ ಸಾಧ್ಯಾಸಾಧ್ಯತೆ (Preponderance of Probability) ಗಳ ಮೇಲೆ ನಿರ್ಣಯಿಸಲಾಗುತ್ತದೆ.

ಸಿವಿಲ್ ವ್ಯಾಜ್ಯಗಳಲ್ಲಿ - ಉದಾ : ಎ ಎನ್ನುವವನು ಬಿ ಎನ್ನುವವನಿಂದ ಒಂದು ನೂರು ರೂಪಾಯಿಗಳ ಸಾಲವನ್ನು ಪಡೆದಿದ್ದರೆ ಎ ಎನ್ನುವವನು ಸಾಲವನ್ನು ತೆಗೆದುಕೊಂಡಿಲ್ಲ ಎಂದು ಹೇಳುವುದು ಸಹಜ. ಆದರೆ ಎ ಎನ್ನುವವನು ಬಡವನಿದ್ದರೆ ಸಾಲವನ್ನು ತೆಗೆದುಕೊಂಡಿರಲು ಸಾಧ್ಯತೆ ಉಂಟು ಎಂದು ನ್ಯಾಯವನ್ನು ನಿರ್ಣಯಿಸುತ್ತೇವೆ.

> ನಿನ್ನ ಹೃದಯವೇ ಅಗ್ನಿಪರ್ವತವಾಗಿದ್ದರೆ, ನಿನ್ನ ಕೈಗಳಲ್ಲಿ ಹೂವು ಅರಳುವುದನ್ನು ಹೇಗೆ ನಿರೀಕ್ಷಿಸುವೆ ? -ಖಲೀಲ್ ಗಿಬ್ರಾನ್

ಇನ್ನು ಕ್ರಿಮಿನಲ್ ಕೇಸುಗಳ ಬಗ್ಗೆ ಹೇಳುವುದಾದರೆ - ಪಿರ್ಯಾದಿಯ ವತಿಯಿಂದ ಸರಕಾರ (Prosecution) ಅಭಿಯೋಜನೆ ಮಾಡಿದ ಆರೋಪವನ್ನು ನಿಸ್ಸಂಶಯವಾಗಿ ಅಥವಾ ನಿಸ್ಸಂದೇಹವಾಗಿ (Beyond reasonable doubt) ಸಿದ್ಧ ಮಾಡಿದೆಯೇ?- ಇದು ನಮ್ಮ ಕ್ರಿಮಿನಲ್ ನ್ಯಾಯಶಾಸ್ತ್ರದ ಮೂಲ ತತ್ವವಾಗಿದ್ದು ಇಂದಿಗೂ ಅದನ್ನೇ ನಾವು ಪಾಲಿಸುತ್ತ ಬಂದಿದ್ದೇವೆ.

ಕ್ರಿಮಿನಲ್ ಕೇಸುಗಳಲ್ಲಿ ಪಿರ್ಯಾದುದಾರನು, ಆರೋಪಿತನು ಮಾಡಿದ ಅಪರಾಧವನ್ನು ನಿಸ್ಸಂದೇಹವಾಗಿ ಅಥವಾ ಸಂಶಯಾತೀತವಾಗಿ ಸಿದ್ಧಮಾಡಬೇಕಾಗುತ್ತದೆ. ಆದರೆ ಉದಾ: ೧ನೇ ಸಾಕ್ಷಿ ಒಂದು ಏಟನ್ನು ಹಾಕಿದ್ದಾನೆ ಎಂದು ಹೇಳಿದಾಗ, ಈ ವ್ಯತ್ಯಾಸವು ಸಂಶಯಕ್ಕೆ ಎಡೆಮಾಡಿ, ಆರೋಪಿಯು ಬಿಡುಗಡೆ ಯಾಗುತ್ತಾನೆ. ಇಂದಿಗೂ ನಾವು ಪಾಲಿಸುತ್ತಿರುವ ತತ್ವ: ೯೯ ಜನ ಅಪರಾಧಿಗಳು ಬಿಡುಗಡೆಯಾದರೂ ಚಿಂತೆಯಿಲ್ಲ ಒಬ್ಬ ಮುಗ್ಧ ಮನುಷ್ಯನಿಗೆ ಶಿಕ್ಷೆಯಾಗಬಾರದು. ಈ ತತ್ವದ ಅಡಿಯಲ್ಲಿ ಅನೇಕ ಸಲ ನ್ಯಾಯದಾನದ ಕೆಲಸ ಕಷ್ಟವೇ ಆಗುತ್ತದೆ.

ಸಿವಿಲ್ ವ್ಯಾಜ್ಯ ಅಥವಾ ಕ್ರಿಮಿನಲ್ ಕೇಸ್ ಇರಲಿ, ನ್ಯಾಯಾಧೀಶರ ಪಾತ್ರ ಕ್ರೀಡಾ ನ್ಯಾಯದರ್ಶಿಯ ಪಾತ್ರದಂತೆ. ಕ್ರೀಡಾ ನ್ಯಾಯದರ್ಶಿ ಸಮ ನ್ಯಾಯವನ್ನು ಗೌರವಿಸಿದರೆ ನ್ಯಾಯಾಧೀಶರು ಕಾನೂನನ್ನು ಗೌರವಿಸುತ್ತಾರೆ. ಆದರೆ ತಾವು ತಿಳಿದುಕೊಳ್ಳಬೇಕಾದ ವಿಷಯ, ಉದಾ : ಕಬಡ್ಡಿ ಪಂದ್ಯದಲ್ಲಿ ಆಟಗಾರನು ತನ್ನ ಶಕ್ತಿಯನ್ನು ಉಪಯೋಗಿಸಿ ಬಂದು ಮಧ್ಯದ ಗೆರೆಯನ್ನು ತಲುಪಿದಾಗ ಮಾತ್ರ ಗೆದ್ದನೆಂದು ಘೋಷಿಸುತ್ತಾನೆ. ಆದರೆ ಆ ಗೆರೆಯನ್ನು ಮುಟ್ಟಲು ಅವನು ಸಹಾಯ ಮಾಡುವುದಿಲ್ಲ. ಅದೇ ರೀತಿ ನ್ಯಾಯಾಧೀಶರ ಪಾತ್ರವು ಕೂಡ ಸಾಕ್ಷಿ ಪುರಾವೆಗಳಿಂದ ಸಿದ್ಧವಾದರೆ ಮಾತ್ರ ಕಕ್ಷಿಗಾರರು ವ್ಯಾಜ್ಯಗಳಲ್ಲಿ ಜಯವನ್ನು ಗಳಿಸಿದರು ಎಂದು ಘೋಷಿಸುತ್ತಾರೆ.

ಇನ್ನು ದಾಖಲೆಗಳ ಬಗ್ಗೆ ಯೋಚಿಸೋಣ.

ಕೊಲೆ ಮಾಡುವ ವ್ಯಕ್ತಿ, ಕೊಲೆಯಾಗುವ ವ್ಯಕ್ತಿಗೆ ನೀನು ನಾಳೆ ಬೆಳಗಿನ ಸೂರ್ಯನನ್ನು ನೋಡಲಾರೆ ಎಂದು ಪತ್ರವನ್ನು ಬರೆದಿದ್ದರೆ ತನಿಖೆಯ ಕಾಲದಲ್ಲಿ ಆ ಪತ್ರ ಪೊಲೀಸರ ಕೈಗೆ ಸಿಕ್ಕಿಬಿದ್ದರೆ ಉತ್ತರ ಸಿದ್ಧವಾಗಿರುತ್ತದೆ. ಇದರಲ್ಲಿರುವ ಹಸ್ತಾಕ್ಷರ ನನ್ನದಲ್ಲ, ಸಹಿ ನನ್ನದಲ್ಲ, ಇತ್ಯಾದಿ.

ಒಂದು ವೇಳೆ ಕೈ ಬರಹ ನಿಪುಣ ಅಥವಾ ಪ್ರವೀಣರಿಗೆ (Hand-writing Experts) ಕಳಿಸಿದರೆ ಅವರಿಂದ ಉತ್ತರ - "೧೦ ಲಕ್ಷಣಗಳಲ್ಲಿ ೫ ಲಕ್ಷಣಗಳು ಕೂಡುತ್ತವೆ ಹಾಗೂ ಇನ್ನು ೫ ಲಕ್ಷಣಗಳು ಕೂಡುತ್ತಿಲ್ಲ."

ಅಡ್ಡಗೋಡೆಯ ಮೇಲೆ ದೀಪ ಇಟ್ಟ ಹಾಗೆ. ಇಂತಹ ಅಭಿಪ್ರಾಯಗಳ ಮೇಲೆ ನ್ಯಾಯ ನಿರ್ಣಯಿಸುವುದು ಎಷ್ಟು ಕಷ್ಟಕರ-ಒಂದು ಕ್ಷಣ ವಿಚಾರಮಾಡಿರಿ. ವರಕವಿ ಡಾ. ದ.ರಾ. ಬೇಂದ್ರೆಯವರು "ರವಿ ಕಾಣದ್ದನ್ನು ಕವಿ ಕಾಣುತ್ತಾನೆ" ಎಂದು ಹೇಳಿದ್ದಾರೆ. ಆದರೆ ಇಂಥ ದೀಪದ ಕೆಳಗಿನ ಕತ್ತಲೆಯಲ್ಲಿ ಕಂಡು ಹಿಡಿದು ನ್ಯಾಯದಾನವನ್ನು ಮಾಡುವ, ನಿಜವಾದ ಕವಿಗಳೆಂದರೆ ನ್ಯಾಯಾಧೀಶರೇ ಎಂದರೆ ತಪ್ಪಾಗಲಿಕ್ಕಿಲ್ಲ.

ಇನ್ನು ಕಾನೂನಿನ ಇನ್ನೊಂದು ಲಕ್ಷಣವಾದ ಶಿಕ್ಷೆಯ ಬಗ್ಗೆ ವಿಚಾರಿಸೋಣ.

ನಾನು ಈಗಾಗಲೇ ಹೇಳಿದಂತೆ ಉಲ್ಲಂಘನೆಗೆ ಶಿಕ್ಷೆ ಇರಬೇಕು ಎಂದು ಸೂತ್ರ ಶೈಲಿ (Greek Aphorismic Style) ಯಲ್ಲಿ ಹೇಳಿದ್ದಾರೆ.

*"ಅಪರಾಧಾನುಸಾರೇಣ ದಂಡಮ್"- ಅಂದರೆ, ದಂಡವು ಅಪರಾಧಕ್ಕನುಸಾರವಾಗಿರಬೇಕು.*

ಉದಾಹರಣೆಗೆ, ಒಬ್ಬ ವ್ಯಕ್ತಿ ತನ್ನ ಹೆಂಡತಿ ಜೀವಂತ ಇರುವಾಗ

ಇನ್ನೊಬ್ಬಳನ್ನು ಮದುವೆಯಾಗುವಂತಿಲ್ಲ. ಒಂದು ವೇಳೆ ಮದುವೆ ಆದರೆ ಅವನಿಗೆ ೭ ವರ್ಷ ಶಿಕ್ಷೆ ಹಾಗೂ ದಂಡಗಳನ್ನು ವಿಧಿಸಬಹುದು.

ಇಲ್ಲಿ ನಾವು ಗಮನಿಸಬೇಕಾದುದೆಂದರೆ ಕಾನೂನಿನಲ್ಲಿ ಅವನಿಗೆ ಗಲ್ಲು ಶಿಕ್ಷೆಯನ್ನು ವಿಧಿಸಿಲ್ಲ. ಕಾರಣವೇನೆಂದರೆ ಒಂದು ವೇಳೆ ಗಲ್ಲು ಶಿಕ್ಷೆಯಾದರೆ ಅವನು ಇಬ್ಬರು ಹೆಂಡದಿರಿಗೂ ಇಲ್ಲವಾಗುತ್ತಾನೆ. ಅದು ಕಾನೂನಿನ ಉದ್ದೇಶವಲ್ಲ.

ನಾನು ಇಷ್ಟು ಹೇಳಿದ ಕೂಡಲೇ ತಮ್ಮಲ್ಲಿ ಯಾರಾದರೂ ಕಾನೂನನ್ನು ಉಲ್ಲಂಘನೆ ಮಾಡಲು ಧೈರ್ಯಮಾಡಬೇಡಿ.

ಒಬ್ಬ ಜ್ಞಾನಿ ಹೇಳಿದ್ದಾನೆ. ಅದೇನೆಂದರ-"ಸುಖದ ಸಾವು ಒಂದು ವ್ಯಾಜ್ಯಕ್ಕಿಂತಲೂ ಮೇಲು"

ಇನ್ನು, ನ್ಯಾಯಾಲಯದಲ್ಲಿ ವಿಳಂಬ. ಇಂದು ಪ್ರಾರಂಭಿಸಿದ ವ್ಯಾಜ್ಯದ ಫಲ ಮಕ್ಕಳು, ಮೊಮ್ಮಕ್ಕಳಿಗಾದರೂ ದಕ್ಕಿದರೆ ಅವರ ಪುಣ್ಯ. ಇದು ಸರ್ವೇಸಾಮಾನ್ಯವಾಗಿ ಜನರಿಗೆ ನ್ಯಾಯಾಲಯದ ಬಗ್ಗೆ ಇರುವ ಅಭಿಪ್ರಾಯ-ಅದು ಸಂಪೂರ್ಣ ತಪ್ಪು ಅಭಿಪ್ರಾಯ ಎಂದು ಹೇಳಲಾಗದಿದ್ದರೂ, ಅದಕ್ಕೆ ಕಾರಣವೇನು ಎನ್ನುವುದನ್ನು ತಿಳಿಯುವುದು ಬಹುಮುಖ್ಯ. ಇದಕ್ಕೆ ಜನಸಂಖ್ಯೆಗನುಗುಣವಾಗಿ ನ್ಯಾಯಾಲಯಗಳು ಇಲ್ಲದಿರುವುದೇ ಕಾರಣ.

ನ್ಯಾಯಾಲಯದಲ್ಲಿ ವಿಳಂಬಕ್ಕಿಂತಲೂ ಮಹತ್ವದ ಸಂಗತಿ ಯೆಂದರೆ-ಸತ್ಯಾನ್ವೇಷಣೆ, ಅದರ ಬಗ್ಗೆ ಸ್ವಲ್ಪ ಯೋಚಿಸೋಣ.

ಸರ್ವೇ ಸಾಧಾರಣ ಪ್ರತೀ ವ್ಯಾಜ್ಯದಲ್ಲಿ ಇಬ್ಬರು ಕಕ್ಷಿಗಾರರು ಇರುತ್ತಾರೆ. ಅವರಲ್ಲಿ ಒಂದು ಪಕ್ಷದವರು ಸತ್ಯವನ್ನಾಡಿ, ಇನ್ನೊಂದು ಪಕ್ಷದವರು ಸುಳ್ಳನ್ನಾಡುವ ಕಾಲವೊಂದಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಎರಡು ಪಕ್ಷದವರು ಸತ್ಯ ಪ್ರತಿಜ್ಞೆಯನ್ನು ಮಾಡಿ, ಸುಳ್ಳನ್ನೇ ಹೇಳಲು ಪ್ರಾರಂಭಿಸಿದ್ದಾರೆ. ಅಂತಹ ಸುಳ್ಳು ಸಾಕ್ಷಿಗಳನ್ನು ಆಧರಿಸಿ ನ್ಯಾಯ ಕೊಡುವುದು ಕಷ್ಟಕರ. ಇದನ್ನು ಸಮಾಜ ಹಾಗೂ ಸಂಬಂಧಪಟ್ಟವರು ಯೋಚಿಸಬೇಕಾದುದು ಅತ್ಯವಶ್ಯ. ಇದನ್ನು ಹೇಳುವ ಉದ್ದೇಶವಿಷ್ಟೆ. ಸರಿಯಾದ ರೀತಿಯಲ್ಲಿ, ಸಮರ್ಪಕವಾದ ನ್ಯಾಯದಾನವಾದಾಗ ಮಾತ್ರ ಸಮಾಜದಲ್ಲಿ ಸುಖ, ಸಮೃದ್ಧಿ ನೆಲೆಸಲು ಸಾಧ್ಯ. ಅಂತಹ ನ್ಯಾಯದಾನವನ್ನು ಮಾಡುವ ಹಾಗೂ ಮಾಡಿಸುವ ಹೊಣೆ ನಮ್ಮ ನಿಮ್ಮೆಲ್ಲರ ಮೇಲಿದೆ. ಕಾರಣ-ಕಾನೂನನ್ನು ತಿಳಿಯುವುದು ಇತ್ತೀಚಿನ ದಿನಗಳಲ್ಲಿ ನಮ್ಮ-ನಿಮ್ಮೆಲ್ಲರ ಉಸಿರಾಟದಷ್ಟೇ ಮಹತ್ವವನ್ನು ಪಡೆದಿದೆ ಎಂದು ಬೇರೆ ಹೇಳಬೇಕಾಗಿಲ್ಲ.

ಇನ್ನು ಕಾನೂನು ಪ್ರಾಧಿಕಾರ ತಿಳಿಸುವ ವಿಷಯಗಳು ಯಾವುವೆಂದರೆ-

೧. ಕಾನೂನಿನ ಅಜ್ಞಾನ ಅಕ್ಷಮ್ಯ. ಉದಾಹರಣೆಗೆ ಕೊಲೆ ಮಾಡಿ, ಅಥವಾ ಮಾನಭಂಗ ಮಾಡಿ, ಅದು ಶಿಕ್ಷಾರ್ಹ ಅಪರಾಧ ಎಂದು ಗೊತ್ತಿದ್ದಿಲ್ಲ ಎಂದು ಹೇಳಲು ಬರುವಂತಿಲ್ಲ.

೨. (Abatment) ಪ್ರಚೋದನೆಗೆ ಶಿಕ್ಷೆ ಉಂಟು, ಅಷ್ಟೇ ಅಲ್ಲ ಅವುಗಳ (Attempt) ಪ್ರಯತ್ನಕ್ಕೂ ಶಿಕ್ಷೆ ಉಂಟು.

೩. ಇನ್ನೂ ಒಂದು ಹೆಜ್ಜೆ ಮುಂದೆ ಹೋದರೆ ಅಪರಾಧ ಮಾಡುವವನ ಜೊತೆ ಸಹಮತ (Common intention) ಹಾಗೂ ಒಂದೇ ಉದ್ದೇಶ (Common object) ಹೊಂದಿದ್ದರೆ ಅವರಿಗೂ ಆರೋಪಿತನಿಗೆ ಅದಷ್ಟೇ ಶಿಕ್ಷೆ ಕೊಡಲಾಗುತ್ತದೆ.

ಬ್ಯಾಂಕ್‌ನಲ್ಲಿ ಸಾಲ ಪಡೆದವನಷ್ಟೇ ಸಾಲ ತೀರಿಸುವ ಹೊಣೆ ಜಾಮೀನುದಾರನ ಮೇಲೂ ಇರುತ್ತದೆ.

ಯಾವುದಾದರೂ ಅರ್ಜಿಯನ್ನು ಕೊಡಲು ಒಂದು ವೇಳೆ ರವಿವಾರ ಕೊನೆಯ ದಿನಾಂಕ ಇದ್ದರೆ, ಆ ಅರ್ಜಿಯನ್ನು ಸೋಮವಾರವೂ ಸಹ ಕೊಡಬಹುದು-ಇತ್ಯಾದಿ

ಆಡಿದ ಮಾತು, ಬಿಟ್ಟ ಬಾಣ, ಕಳೆದ ಕಾಲ, ಉಪೇಕ್ಷಿಸಿದ ಅವಕಾಶ ಮತ್ತೆ ಬಾರವು ಎಂದು ತಿಳಿದವರು ಹೇಳಿದ್ದಾರೆ. ಭೂಮಿಗಿಂತ ದೊಡ್ಡ ವಸ್ತು ಯಾವುದೆಂದರೆ - ತಾಯಿ. ಆಕಾಶಕ್ಕಿಂತ ದೊಡ್ಡ ವಸ್ತು ಯಾವುದೆಂದರೆ - ಗುರಿ ಹಾಗೂ ಗಾಳಿಗಿಂತ ವೇಗವಾದ ವಸ್ತು ಯಾವುದೆಂದರೆ - ಅವಕಾಶ ಎಂದು ಹೇಳುತ್ತಾರೆ.

ಆದ್ದರಿಂದ ಕಾನೂನು ಪ್ರಾಧಿಕಾರ ಕೊಡಮಾಡುವ ಇಂಥ ಕಾನೂನು ತಿಳುವಳಿಕೆಯಂಥ ಅವಕಾಶವನ್ನು ಕಳೆದುಕೊಳ್ಳದೆ, ತಮ್ಮ ತಮ್ಮ ಗುರಿಗಳನ್ನು ಸಾಧಿಸುವಲ್ಲಿ ಶ್ರೇಷ್ಠ ಚಿಂತನೆಗಳು ಎಲ್ಲಾ ಕಡೆಗಳಿಂದ ನಿಮ್ಮತ್ತ ಹರಿದು ಬರಲಿ ಎಂದು ಹಾರೈಸುವೆ.

"The Laws are with us and God is on our Side"

**ಇದರ ಅರ್ಥ :** ನಾವುಗಳು ಕಾನೂನನ್ನು ಪಾಲಿಸಿದ್ದೇ ಆದರೆ ಭಗವಂತ ಯಾವಾಗಲೂ ನಮ್ಮ ಪಕ್ಷವನ್ನೇ ವಹಿಸುತ್ತಾನೆ ಎಂದಾಗುತ್ತದೆ. ಕಾರಣ, ನಾವು ನೀವೆಲ್ಲರೂ ಕಾನೂನನ್ನು ಪಾಲಿಸೋಣ. ಆ ಭಗವಂತ ಸದಾ ನಮ್ಮ ಪಕ್ಷವನ್ನೇ ವಹಿಸುವಂತಾಗಲಿ.

●

ಕಾವ್ಯ ಅಭಿವ್ಯಕ್ತಗೊಂಡ ಒಂದು ಅಭಿಪ್ರಾಯವಲ್ಲ; ಅದು
ರಕ್ತಸ್ರಾವದ ಗಾಯದಿಂದಲೋ, ಮುಗುಳ್ನಗೆಯ
ಬಾಯಿಯಿಂದಲೋ ಹೊಮ್ಮಿದ ಹಾಡು!

-ಖಲೀಲ್ ಗಿಬ್ರಾನ್







# ಧರ್ಮ ಮತ್ತು ವಿಜ್ಞಾನ - ಪೂರಕ ಸಂಯೋಜನೆ

-ಡಾ. ವಿ.ವಿ. ಬಾಗಲಕೋಟಿ, ವಿಶ್ವಚೇತನ, ಗೋಕಾಕ

ಆಧುನಿಕ ಸಾಪೇಕ್ಷತಾ ಸಿದ್ಧಾಂತದ ಮಹತ್ವದ ನಿರ್ಣಯಗಳಲ್ಲಿ ಒಂದಾದ 'ಶಕ್ತಿ ಮತ್ತು ದ್ರವ್ಯಗಳ' ಏಕತ್ವವು ಬಸವಣ್ಣನವರ ವಚನವೊಂದರಲ್ಲಿ ಕಾಣಸಿಗುವಂತೆ, ಆಧುನಿಕ ಸಂತರೂ ಜ್ಞಾನಯೋಗಿಗಳೂ ಆದ ಪರಮಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳು, ವಿಜಾಪುರ ಅವರು ಬರೆದ ಒಂದು ಆಧ್ಯಾತ್ಮ ಪ್ರಧಾನವಾದ 'Nothing' ಎಂಬ ಶೀರ್ಷಿಕೆಯ ಒಂದು ಆಂಗ್ಲಭಾಷಾ ಕವನದಲ್ಲಿ ಅತ್ಯಾಧುನಿಕ ವೈಜ್ಞಾನಿಕ ಸಂಶೋಧನೆಗಳಾದ (೧) ಸಾಪೇಕ್ಷ ಸಿದ್ಧಾಂತ, (೨) ಪ್ರಸರಣಗೊಳ್ಳುತ್ತಿರುವ ವಿಶ್ವ, (೩) ಬ್ರಹ್ಮಾಂಡ ಮಹಾಸ್ಫೋಟ ಸಿದ್ಧಾಂತ ಇವುಗಳ ಅಂಶಗಳು ಸಾಂದರ್ಭಿಕವಾಗಿ ಹಿನ್ನೆಲೆಯಲ್ಲಿರುವುದು ಕಂಗೊಳಿಸುತ್ತದೆ.

ಅಲ್ಬರ್ಟ್ ಐನ್‌ಸ್ಟಿನ್‌ರ ಒಂದು ಜನಪ್ರಿಯ ವಿಮರ್ಶಾತ್ಮಕ ಹೇಳಿಕೆ ಹೀಗಿದೆ:

Religion without Science is blind;
Science without Religion is lame.

(ವಿಜ್ಞಾನರಹಿತ ಧರ್ಮ ಕುರುಡು;
ಧರ್ಮರಹಿತ ವಿಜ್ಞಾನ ಕುಂಟು)

ಐನ್‌ಸ್ಟಿನರ ನಿರೀಕ್ಷೆಯಲ್ಲಿ ವಿಜ್ಞಾನ ಸಹಿತ ಧರ್ಮವಿರಬೇಕೆಂದೂ ಮತ್ತು ಧರ್ಮಸಹಿತ ವಿಜ್ಞಾನವಿರಬೇಕು ಎಂದೂ ಆಗುತ್ತದೆ. ಈ ಹೇಳಿಕೆಯಲ್ಲಿ ಪ್ರಥಮ ಸಾಲನ್ನು ತೆಗೆದುಕೊಂಡು ವಿವೇಚಿಸೋಣ. ಬಸವಣ್ಣನವರು ಮತ್ತು ಶರಣರು ತಮ್ಮ ವಚನಗಳ ಮುಖಾಂತರ ಈ ಸಾಲಿನಲ್ಲಿಯ ನಿರ್ದೇಶನವನ್ನು ಅನುಷ್ಠಾನಕ್ಕೆ ತಂದಿದ್ದಾರೆ. ಪ್ರಸ್ತುತ ಕೃತಿಯಲ್ಲಿ ನಾವು ಅಭ್ಯಸಿಸಿದ ವಚನಗಳೆಲ್ಲವುಗಳಲ್ಲಿಯೂ ಧರ್ಮದ ಅಂಗವಾಗಿ ಒಂದೊಂದು ತತ್ವವನ್ನು ತಿಳಿಸುತ್ತ ಬಂದಿದ್ದಾರೆ. ಅದನ್ನು ಸ್ಪಷ್ಟಪಡಿಸಿ ವಿವರಿಸಲು, ಸಂದರ್ಭೋಚಿತ ವೈಜ್ಞಾನಿಕ ಸಿದ್ಧಾಂತ ಇಲ್ಲವೆ ತತ್ವ ಒಂದನ್ನು ಉಪಮೆ ಅಥವಾ ಉದಾಹರಣೆಯಾಗಿ ನಿವೇದಿಸಿದ್ದಾರೆ. ಹೀಗಾಗಿ ಧರ್ಮದೊಡನೆ ವಿಜ್ಞಾನದ ಸಂಯೋಜನೆ ಆಗಿದೆ. ವಿಜ್ಞಾನವಿರದ ಧರ್ಮದಲ್ಲಿ ಇರಬಹುದಾಗಿದ್ದ ಅಂಧತ್ವವನ್ನು ಹೋಗಲಾಡಿಸಿದ್ದಾರೆ.

ಮೇಲೆ ಹೇಳಿದ್ದು ವಚನಗಳ ವಿಚಾರವಾದರೆ, ಪರಮಪೂಜ್ಯ ಸಿದ್ಧೇಶ್ವರ ಸ್ವಾಮಿಗಳ ಇತ್ತೀಚಿನ 'ಶೂನ್ಯ' ಎಂಬ ಶೀರ್ಷಿಕೆಯ ಒಂದು ಕವನದಲ್ಲಿ ವಿಜ್ಞಾನದ ಸಿದ್ಧಾಂತಗಳ ತಳಹದಿಯ ಮೇಲಿಂದ ಧರ್ಮದ ಏಣಿಯ ಮುಖಾಂತರ ಆಧ್ಯಾತ್ಮದ ಶಿಖರಕ್ಕೆ ಏರಿರುವುದನ್ನು ಕಾಣುತ್ತೇವೆ. ಇಲ್ಲಿ ವಿಜ್ಞಾನವು ಏಕಾಕಿಯಾಗಿರದೆ ಧರ್ಮದೊಡನೆ ಸಂಯೋಜಿತವಾಗಿದ್ದನ್ನು ಕಾಣುತ್ತೇವೆ. ಹೀಗಾಗಿ ವಿಜ್ಞಾನದ ಅಂಗವಿಕಲತೆಯನ್ನು ನಿವಾರಿಸಿದಂತಾಗಿದೆ. ಪೂಜ್ಯ ಶ್ರೀಗಳ ಮೂಲ ಆಂಗ್ಲ ಭಾಷೆಯ ಕವನವನ್ನೂ ನಾನು ಮಾಡಿರುವ ಕನ್ನಡ ಅನುವಾದವನ್ನು ಕೆಳಗೆ ಕೊಡಲಾಗಿದೆ:

**Nothing**

Riding a ray
I made my way into the sky.
For many a millennium,
the race did last, but Nowhere the end.

I felt neither the speed not the space;
Stars zoomed by;
Through milky-way my ray whizzed;
Again and again.
The ray went round and round the universe.
Depth deepened,
Ends extended,
Infinitely.

What deepens?
What extends?
Nothing! Nothing!
Nothing expands for ever exists for eternity.
Form this nothing,
This something called Universe
Extends in time
Stretches in space.

The limited from the limitless;
The limited from the limitless;
The dying from the deathless;
The multiple from the non-dual.
What a mystery this sky is!
Eye sees it not



Hands of course fail to hold,
It being beyond the forms and pleasures
How can the mind reflect it in its ripples?

Lost in amazement
Gets my mind
When it sees
Everything coming from nothing and nothing
beding
at the bottom of everything.

What exists is Nothing
In nothing we live,
In 'nothing' we are bound
'Nothing' we know
Of this 'nothing'.
Still we dream that we are knowing something;
Truth smiles when
Man Claims knowledge!

**-Shri Siddeshwar Swamiji**
Gnyana Yogashram, Bijapur.

## ಶೂನ್ಯ

ಪ್ರಕಾಶ ಕಿರಣವೇರಿ ಪಯಣ ಹೊರಟೆ
ಬಾನಿನಂಗಳದಲಿ.
ಸಹಸ್ರ ಸಹಸ್ರ ಸಂವತ್ಸರಗಳಲಿ
ಸಾಗುತಿತ್ತು ಪಂದ್ಯದೋಟ
ಅಂತ್ಯವೆಂಬುದಿಲ್ಲವೇ ಇಲ್ಲ.
ವೇಗದರಿವಿಲ್ಲವೆನಗೆ
ಬಯಲಿನ ತಿಳಿವಿಲ್ಲ
ನಕ್ಷತ್ರಗಳು ದಾಟಿ ಧಾವಿಸಿದವಾಚೆ
ಕ್ಷೀರಪಥದಲಿ.

ಎನ್ನ ಕಿರಣಪಯಣ
ಸಾಗುತಿತ್ತು ತೂರಿ ತೂರಿ
ಸುತ್ತುತಿತ್ತು ಕಿರಣ ವಿಶ್ವದಲಿ ತಿರುಗಿ ತಿರುಗಿ,
ಹೆಚ್ಚುತಿತ್ತು ಆಳ ಮತ್ತೆ ಮತ್ತೆ,
ಸಾಗುತಿತ್ತು ಸೀಮೆ ಮುಂದೆ ಮುಂದೆ
ಅನಂತವಾಗಿ.

ಮುಂದುವರೆಯುತಿಹುದು ಯಾವುದು?
ಆಳವಾಗುತಿರುವುದು ಆವುದು?
ಶೂನ್ಯ ಶೂನ್ಯ!
ವಿಕಸನಗೊಳುತಿರುವದು ಆವುದು? ಶೂನ್ಯ.
ಶೂನ್ಯದ ಅಸ್ತಿತ್ವ ಅನಂತಕಾಲ.

ಈ ಶೂನ್ಯದಿಂದ ಹುಟ್ಟಿಕೊಂಡಿದೆ
ವಿಶ್ವವೆಂಬುದೊಂದು
ಚಾಚಿಕೊಂಡಿರುತಲಿದೆ ಕಾಲದಲಿ,
ಹರಡಿಕೊಂಡಿದೆ ಬಯಲಿನಲಿ.
ಸೀಮಾತೀತದಿಂದ ಸೀಮಿತದೆಡೆಗೆ,
ಅಮರತ್ವದಿಂದ ಮೃತ್ಯುವಿನೆಡೆಗೆ
ಅದ್ವೈತದಿಂದ ಅನೇಕತ್ವದೆಡೆಗೆ,
ಏನು ಪವಾಡ, ನಭವಿದು!

ದೃಷ್ಟಿಗೆ ಗೋಚರಿಸುತ್ತಿಲ್ಲ,
ಹಸ್ತಕೆ ನಿಲುಕದಲ್ಲ ಅದು
ರೂಪ-ಆನಂದಾತೀತವಾದುದಲ್ಲ!
ಮನವು ತನ್ನ ಏರಿಳಿತಗಳ ಮಧ್ಯೆ
ಅದರ ಅರಿವು ಪಡೆವುದು ಹೇಗೆ?

ಎಲ್ಲವೂ ಶೂನ್ಯದಿಂದ ದೊರೆಯುತಿಹುದನು ಕಂಡು
ಶೂನ್ಯದ ತಳದಲಿ ಎಲ್ಲವೂ ಇರುತಿಹುದನು ತಿಳಿದು
ಮನವು ಚಕಿತಗೊಂಡು
ಕಳೆದುಕೊಳ್ಳುತಲಿದೆ ತನ್ನ ತಾನನೆ.

ಇರುವುದೆಲ್ಲವೂ ಶೂನ್ಯ,
ನಾವಿರುವುದೇ ಶೂನ್ಯದಲಿ
ನಾವು ಶೂನ್ಯಕೆ ಬಂಧಿತರು.
ಶೂನ್ಯದ ಬಗೆಗೆ
ನಮಗೆ ಗೊತ್ತಿರುವದೇ ಶೂನ್ಯ
ಹೀಗಿದ್ದರೂ ನಮಗೂ ಸ್ವಲ್ಪ ಗೊತ್ತಿದೆ
ಎಂಬುದು ಕೆಲವರ ಕನಸು.
ಮುಗುಳ್ನಗುತಿದೆ ಸತ್ಯ.
ಮಾನವ ಜ್ಞಾನಿ ಎಂದಾಗ!

ಕವನದ ಮೊದಲ ಪದ್ಯದಲ್ಲಿ ಕಿರಣದೊಡನೆಯ ಪ್ರಯಾಣವು ಪ್ರಕಾಶವೇಗದಲ್ಲಿ ಸಾಗಿರುತ್ತದೆ. ಪ್ರಕಾಶವೇಗ C, ಇದರ ಮೊತ್ತ $೩x೧೦^{೮}$ M/Sec. ಇದೊಂದು ಸ್ಥಿರಾಂಕವಾಗಿದ್ದು, ವಿಶಿಷ್ಟ ಸಾಪೇಕ್ಷತಾ ಸಿದ್ಧಾಂತದ ಪ್ರಕಾರ, ವಿಶ್ವದಲ್ಲಿ ಅತ್ಯಧಿಕ ವೇಗವಾಗಿದೆ. ಇದಲ್ಲದೆ, ಸಮವೇಗದಿಂದ ಯಾವುದೇ ವಸ್ತು ಚಲಿಸುತ್ತಿರುವಾಗ ಆ ವೇಗದ







ಮೊತ್ತ ಎಷ್ಟೇ ದೊಡ್ಡದಿದ್ದರೂ ಅದರ ಅರಿವು ಚಲಿಸುವವರಿಗೆ ಆಗುವುದಿಲ್ಲ. ಉದಾಹರಣೆಯಾಗಿ, ನಾವು ಪೃಥ್ವಿಯ ಮೇಲಿರುವುದರಿಂದ, ನಾವೂ ಪೃಥ್ವಿಗಿರುವ (೧) ಅಕ್ಷದ ಸುತ್ತಲಿನ ಹಾಗೂ (೨) ಸೂರ್ಯನ ಸುತ್ತಲಿನ ತನ್ನ ಪಥದಲ್ಲಿರುವ ಚಲನಗಳನ್ನು ಹೊಂದಿರುತ್ತೇವೆ. ಆದರೆ ಅವುಗಳ ಅರಿವು ನಮಗಿಲ್ಲ. ಕಾರಣವೇನೆಂದರೆ, ಅವು ಸಮವೇಗಗಳಾಗಿರುತ್ತವೆ. ಅದಕ್ಕೇ ಶ್ರೀಗಳವರು ವೇಗದ ಅರಿವು ಇಲ್ಲ ಎಂದಿದ್ದಾರೆ. ಇದಲ್ಲದೆ ವಿಶಿಷ್ಟ ಸಾಪೇಕ್ಷತಾ ಸಿದ್ಧಾಂತದನ್ವಯ ಪೃಥ್ವಿಯ ಮೇಲಿನ ಸ್ಥಿರ ನಿರೀಕ್ಷಕನಿಗೆ ಪ್ರಕಾಶ ವೇಗದಿಂದ ಚಲಿಸುವ ವ್ಯವಸ್ಥೆಯಲ್ಲಿಯ ಕಾಲವು ನಿಂತೇ ಇರುವಂತೆ ಭಾಸವಾಗುತ್ತದೆ. ಸ್ಥಿರ ನಿರೀಕ್ಷಕನಿಗೆ ಸಹಸ್ರ, ಸಹಸ್ರ ವರ್ಷ ಕಾಲ ಕ್ರಮಿಸಿದರೂ C ವೇಗದಿಂದ ಚಲಿಸುವಾಗ ಕಾಲವು ನಿಂತಂತೆ ಇರುವ ಕಾರಣ ಅಲ್ಲಿ ಕಾಲದ ಬದಲಾವಣೆಯು ಇಲ್ಲ. ಹೀಗೆ ಚಲಿಸುವಾಗ ಮುಂದಿನ ಬಯಲಿನ ಪರಿಜ್ಞಾನವೂ ಆಗುವುದಿಲ್ಲ.

ಮತ್ತು C ವೇಗದಿಂದ ಚಲಿಸುತ್ತಿರುವ ನಿರೀಕ್ಷಕನಿಗೆ, ಸುತ್ತಲಿನ ಕ್ಷೀರಪಥದಲ್ಲಿಯ ನಕ್ಷತ್ರಗಳೇ ಚಲಿಸಿ ತನ್ನನ್ನು ದಾಟಿ ಹಿಂದೆ ಧಾವಿಸಿದಂತೆಯೂ ತಾನು ಸ್ಥಿರವಾಗಿರುವಂತೆಯೂ ಭಾಸವಾಗುತ್ತದೆ.

ಎರಡನೇ ಪದ್ಯದಲ್ಲಿ ಕಿರಣ ಪಯಣದ ಪಥದ ವರ್ಣನೆ ಇದೆ. ಹೊರಗಿನ ಸ್ಥಿರವ್ಯವಸ್ಥೆಯ ದೃಷ್ಟಿಯಿಂದ ಎಷ್ಟೇ ಕಾಲ ಗತಿಸಿದರೂ, ಪ್ರಕಾಶ ಕಿರಣವು ಮುಂದೆ ಸಾಗುತ್ತಲೇ ಇರುತ್ತದೆ. ಸಾಮಾನ್ಯವಾಗಿ ಸಣ್ಣ ಅಂತರದ ದೂರವನ್ನು ಪ್ರಕಾಶವು ಚಲಿಸುತ್ತಿರುವಾಗ ಸರಳ ರೇಖೆಯಲ್ಲಿ ಹೋದಂತೆ ಕಾಣುತ್ತದೆ. ಆದರೆ ದೀರ್ಘ ಪಥದಲ್ಲಿ ಕಾಲ ಬಯಲ ಸಂಯುಕ್ತದಲ್ಲಿ ವೃತ್ತೀಯ ಪಥವಾಗಿ ಮತ್ತೆ ಮತ್ತೆ ಅದೇ ಪಥವನ್ನು ಕ್ರಮಿಸುತ್ತಿರುವ ಚಿತ್ರಣ ಇಲ್ಲಿದೆ. ಮೊದಲು ಸೀಮೆ ಮುಂದೆ ಇದ್ದಂತೆ ಕಂಡರೂ ಕಿರಣವು ಚಲಿಸುತ್ತಿರುವಾಗ ಸೀಮೆಯು ಇನ್ನೂ ಮುಂದೆ ಸಾಗಿದಂತೆ ಗೋಚರವಾಗುತ್ತದೆ.

ಮೂರನೆ ಪದ್ಯದಲ್ಲಿ ಮುಂದುವರೆಯುತ್ತಿರುವುದು ಯಾವುದು? ಆಳವಾಗುತ್ತಿರುವುದು ಯಾವುದು? ಅಲ್ಲದೆ ಪ್ರಸರಣಗೊಳ್ಳುತ್ತಿರುವುದು ಯಾವುದು? ಎಂಬ ಪ್ರಶ್ನೆಗಳನ್ನು ಕೇಳಿ ನಮ್ಮ ಕಡೆಯಿಂದಲೇ ಶೂನ್ಯವೆಂಬ ಉತ್ತರ ಕೊಡಿಸಿ ಜ್ಞಾನೋದಯ ಮಾಡಿಸುತ್ತಿದ್ದಾರೆ ಶ್ರೀಗಳು.

ಈ ಸಂದರ್ಭದಲ್ಲಿ ಖಗೋಳ ವಿಜ್ಞಾನದಲ್ಲಿ ಸಂಶೋಧಿಸಲ್ಪಟ್ಟ "ಪ್ರಸರಣಗೊಳ್ಳುತ್ತಿರುವ ವಿಶ್ವ" ಸಿದ್ಧಾಂತದ ಬಗ್ಗೆ ತಿಳಿಯುವುದು ಪ್ರಸ್ತುತ ಎನಿಸುತ್ತದೆ.

**ಹಬ್ಬಲ್‌ನ "ಪ್ರಸರಣಗೊಳ್ಳುತ್ತಿರುವ ವಿಶ್ವ" ಸಿದ್ಧಾಂತ :**

ಧ್ವನಿಪ್ರಸಾರದಲ್ಲಿ ಡಾಪ್ಲರ ಪರಿಣಾಮವಿದ್ದಂತೆ, ಪ್ರಕಾಶ ಪ್ರಸಾರದಲ್ಲಿಯೂ ಕೂಡಾ, ಪ್ರಕಾಶ ಮೂಲವು ನಿರೀಕ್ಷಕರಿಂದ ದೂರ ಹೋಗುತ್ತಿದ್ದರೆ, ಮೂಲದ ವರ್ಣಪಟಲ ರೇಖೆಗಳು ಕೆಂಪುವಲಯದ (ದೀರ್ಘ ತರಂಗದ) ಕಡೆಗೆ ಪಲ್ಲಟಗೊಳ್ಳುತ್ತವೆ ಎಂದು ಪ್ರೆಂಚ ವಿಜ್ಞಾನಿ ಫೀಜೂವು ೧೮೪೮ರಲ್ಲಿ ಸಿದ್ಧಪಡಿಸಿದನು. ಆದರೆ ಪ್ರಕಾಶ ಮೂಲವು ನಿರೀಕ್ಷಕನನ್ನು ಸಮೀಪಿಸುತ್ತಿದ್ದರೆ ವರ್ಣಪಟದಲ್ಲಿಯ ರೇಖೆಗಳು, ನೇರಳೆ ವಲಯ (ಹ್ರಸ್ವತರಂಗ)ದ ಕಡೆಗೆ ಪಲ್ಲಟಗೊಳ್ಳುತ್ತವೆ.

೧೮೬೮ರಲ್ಲಿ ಇಂಗ್ಲೀಷ್ ಖಗೋಳ ವಿಜ್ಞಾನಿ ವಿಲಿಯಮ್ ಹಗ್ಗಿನ್ಸನು, ಸಿರಿಯಸ (Serious) ನಕ್ಷತ್ರದಿಂದ ಹೊರಟ ಪ್ರಕಾಶದ ವರ್ಣ ಪಟಲರೇಖೆಗಳಲ್ಲಿ ಸೂಕ್ಷ್ಮವಾದರೂ ನಿಶ್ಚಿತವಾದ ಕೆಂಪು ಪಲ್ಲಟವನ್ನು ಕಂಡುಹಿಡಿದನು. ೧೯೧೨ರಲ್ಲಿ ಅಮೇರಿಕದ ಮೆಲ್ವಿನ್ ಸ್ಲೈಫರನು ಅಂಡ್ರೋಮಿಡಾ ನಕ್ಷತ್ರ ಮಂಡಲವು ನಮ್ಮ ಸೌರವ್ಯೂಹವನ್ನು ೨೦೦ ಕಿ.ಮೀ./ಸೆ. ವೇಗದಿಂದ ಸಮೀಪಿಸುತ್ತಿದೆ ಎಂದು ಘೋಷಿಸಿದನು. ಇದಲ್ಲದೆ ಇನ್ನೂ ಆಶ್ಚರ್ಯಕರವಾದ ಸಂಗತಿ ಎಂದರೆ ತಾನು ನಿರೀಕ್ಷಿಸಿದ, ಎರಡನ್ನು ಮಾತ್ರ ಹೊರತುಪಡಿಸಿ ಉಳಿದೆಲ್ಲ ನಕ್ಷತ್ರ ಮಂಡಲ(Galaxies)ಗಳೂ ನಮ್ಮಿಂದ (ಸೌರವ್ಯೂಹದಿಂದ) ದೂರ ಚಲಿಸುತ್ತಿವೆಯೆಂದೂ ವರ್ಣಪಟಲ ರೇಖೆಗಳ ಪಲ್ಲಟಗಳ ಅಭ್ಯಾಸದಿಂದ ಕಂಡುಹಿಡಿದನು.

ಹಬ್ಬಲನು (೧೯೨೮-೩೧) ಕೆಲಿಫೋರ್ನಿಯಾದಲ್ಲಿಯ ೧೦೦ ಇಂಚು ದೂರದರ್ಶಕದ ನಿರೀಕ್ಷಣಾಗಳಿಂದ "ವಿಶ್ವದ ಪ್ರಸರಣಗೊಳ್ಳುವಿಕೆ ಸಿದ್ಧಾಂತವನ್ನು" ಪ್ರಕಟಿಸಿದನು. ಇದನ್ನು ಸರಳೀಕರಿಸಲು ಒಂದು ಸಾಮಾನ್ಯ ಉದಾಹರಣೆಯನ್ನು ಕೊಡುತ್ತಾರೆ. ಮಕ್ಕಳು ಆಟಿಗೆಯ ರಬ್ಬರ ಬಲೂನನ್ನು ಗಾಳಿ ತುಂಬಿ ಉಬ್ಬಿಸುತ್ತಿರುವಾಗ ರಬ್ಬರ ಬಲೂನಿನ ಮೇಲಿನ ಬಣ್ಣದ ಚುಕ್ಕೆಗಳು, ಸಣ್ಣ ಚಿತ್ರಗಳು ಒಂದರಿಂದ ಮತ್ತೊಂದು ದೂರ ದೂರವಾಗುತ್ತ ಹೋಗುತ್ತವೆ. ಅದೇ ಕಾಲಕ್ಕೆ ರಬ್ಬರ ಗೋಲದ ವ್ಯಾಸವೂ ಹೆಚ್ಚುತ್ತದೆ. ಇಲ್ಲಿ ಗಾಳಿಯು ಪ್ರಸರಣಗೊಳ್ಳುತ್ತಿದ್ದರೆ, ಅಲ್ಲಿ ಪ್ರಸರಣಗೊಳ್ಳುತ್ತಿರುವುದು ಯಾವುದು? ನಾಲ್ಕನೇ ಪದ್ಯದ ಈ ಶೂನ್ಯದಿಂದ ಹುಟ್ಟಿಕೊಂಡಿದೆ, ವಿಶ್ವವೆಂಬುದೊಂದು ಹರಡಿಕೊಂಡಿದೆ ಬಯಲಿನಲ್ಲಿ, ಚಾಚಿಕೊಂಡಿರುತಲಿದೆ ಕಾಲದಲಿ ಎಂಬ ಸಾಲುಗಳಲ್ಲಿ ಇನ್ನೊಂದು ಆಧುನಿಕ ವೈಜ್ಞಾನಿಕ ಸಿದ್ಧಾಂತವು ಅಡಗಿಕೊಂಡಿದ್ದಂತಿದೆ.

**ಲೆಮಿಟ್ರೆ ಮತ್ತು ಎಡಿಂಗ್ಟನ್‌ರ ಮಹಾಸ್ಫೋಟ-ಮಾದರಿ**

ಶೂನ್ಯ ಗಾತ್ರದಿಂದ ಪ್ರಸರಣಗೊಳ್ಳುತ್ತಿರುವ ವಿಶ್ವದ ಕಲ್ಪನೆಯನ್ನು ಮೊದಲು ೧೯೨೨ರಲ್ಲಿ ಕೊಟ್ಟವರು ರಶಿಯನ್ ಗಣಿತಜ್ಞ ಅಲೆಕ್ಸಾಂಡರ್ ರೋರಿಚ್ ಫ್ರೈಡಮನ್. ಅದನ್ನು ಪೂರ್ತಿಗೊಳಿಸುವ



ಮೊದಲು ತೀರಿಕೊಂಡರು. ೧೯೨೭ರಲ್ಲಿ ಬೆಲ್ಜಿಯನ್ ಗಣಿತ ತಜ್ಞ ಅಬೆ ಜಾರ್ಜಿಸ್ ಎಡ್ವರ್ಡ್ ಲೆಮೆಟ್ರೆ (೧೮೯೪-೧೯೬೬) ಅವರು ಸ್ವತಂತ್ರವಾಗಿ ಅದೇ ತರದ ವಿಚಾರಗಳನ್ನು ಮುಂದಿಟ್ಟರು. ಲೆಮೆಟ್ರೆರವರ ಪ್ರಕಾರ ಅತ್ಯಂತ ಪ್ರಾಚೀನ ವಿಶ್ವದ ಸರ್ವದ್ರವ್ಯ ರಾಶಿಯು ಚಿಕ್ಕ ಗಾತ್ರದಲ್ಲಿ ಸಾಂದ್ರೀಕರಿಸಲ್ಪಟ್ಟಿತು. ಇದಕ್ಕೆ ಅವನು ವಿಶ್ವದ ಅಂಡ(ಭಾರತೀಯರು ಬ್ರಹ್ಮಾಂಡವೆಂದು ಹೇಳುವಂತೆ)ವೆಂದು ಕರೆದನು. ಅಂಡವು ಅಗಾಧ ಸಾಂದ್ರತೆ ಮತ್ತು ಅತ್ಯಧಿಕ ಹೆಚ್ಚಿನ ಆಂತರಿಕ ಒತ್ತಡ ಹೊಂದಿತ್ತು. ಪರಿಣಾಮವಾಗಿ, ಭಯಂಕರ ಶಬ್ದದೊಂದಿಗೆ ಮಹಾಸ್ಫೋಟ ಗೊಂಡಿತು. ಬ್ರಹ್ಮಾಂಡದೊಳಗೆ ಅದುಮಿಸಿ ಇಡಲ್ಪಟ್ಟ ಅಗಾಧ ಶಕ್ತಿಯು ಸ್ಫೋಟದಿಂದಾಗಿ ಹೊರ ಚಿಮ್ಮಲ್ಪಟ್ಟಿತು. ಕಣಗಳು ಬಯಲಿನಲ್ಲಿ ತಮ್ಮೊಳಗಿನ ಆಂತರಿಕ ಕ್ರಿಯೆಗಳಿಂದ ಸಾಂದ್ರಗೊಂಡು ನಕ್ಷತ್ರಗಳು, ನೀಹಾರಿಕೆಗಳು, ವ್ಯೂಹಗಳು, ಗ್ರಹಗಳು ರಚನೆಗೊಂಡವು. ಅಬೆಲೆಮಿಟ್ರೆ ಮತ್ತು ಸರ್ ಅರ್ಥರ್ ಎಡಿಂಗ್ಟನ್ ಇವರುಗಳು ಸಂಯುಕ್ತವಾಗಿ ಈ ಮಾಡೆಲನ್ನು (ಮಾದರಿ) ಕೊಟ್ಟರು. ರಶಿಯಾದಲ್ಲಿ ಜನ್ಮ ತಳೆದ ಅಮೇರಿಕನ್ ಜಾರ್ಜ್ ಗ್ಯಾಮೌ (೧೯೦೪-೧೯೬೮) ಇದನ್ನು ಮಹಾಸ್ಫೋಟವೆಂದು ಹೆಸರಿಸಿದನು. ದೊಡ್ಡ ಶಬ್ದದೊಂದಿಗೆ ಬ್ರಹ್ಮಾಂಡದ ಸಿಡಿತಕ್ಕೆ ಈ ಮಾದರಿಯಲ್ಲಿ ವಿಶ್ವವು ಮಹಾಶಬ್ದದೊಂದಿಗೆ ಪ್ರಾರಂಭವಾಗಿ ಕೆಲ ಅವಧಿಯವರೆಗೆ ಸಾವಧಾನಗೊಂಡು ಮುಂದೆ ಅನಂತಕ್ಕೆ ಪ್ರಸಾರಗೊಳ್ಳುತ್ತದೆ. ಈ ಸ್ಫೋಟವು ಒಂದು ಕಾಲ್ಪನಿಕ ಕಥೆಯಾಗಿರದೆ, ಒಂದು ನೈಜ ಘಟನೆ ಎಂದು ವೈಜ್ಞಾನಿಕ ಜಗತ್ತು ಅಂಗೀಕರಿಸಿತು. ಸ್ಫೋಟದ ಮೊದಲು ಪ್ರಾರಂಭಿಕ ವಿಶ್ವದ ಅಗಾಧ ಉಷ್ಣತೆ ಎಷ್ಟೆಂಬುದು ಗೊತ್ತಿಲ್ಲ. ಸ್ಫೋಟ ಕಾಲಕ್ಕಿದ್ದ ಉಷ್ಣತೆ ಯಾವುದು ಅದು ನಿರ್ಣಯಿಸಬೇಕಾಗಿದೆ. ಪ್ರಾರಂಭಿಕ ವಿಶ್ವ ಅತೀ ಉಷ್ಣತೆ ಹೊಂದಿದ್ದು ಸಮವಾಗಿ ಸಜಾತಿಯ ಉಷ್ಣವಾಗಿ ಉಷ್ಣಿಕ ಸಮತೋಲನ (Thermal equilibrium)ದಲ್ಲಿ ಇದ್ದಿತು. ಸ್ಫೋಟದ ಶೂನ್ಯ ಕ್ಷಣದಿಂದ ೧/೧೦,೦೦೦ ಸೆಕೆಂಡ ಮೊದಲು ವಿಶ್ವದ ಉಷ್ಣತೆಯ ಟ್ರಿಲಿಯನ್ ಡಿಗ್ರಿ ಕೆಲ್ವಿನ್‌ದಷ್ಟಕ್ಕಿಂತ ಹೆಚ್ಚಾಗಿತ್ತು. ಅಜಮಾಸ ಬಿಲಿಯನ್ ವರ್ಷಗಳ ನಂತರ ಉಷ್ಣತೆಯು ಕೆಲವು ಸಾವಿರ ಅಂಶಗಳಿಗೆ ಇಳಿಯಿತು. ಮುಂದೆ ಒಂದು ಬಿಲಿಯನ್ ವರ್ಷಗಳಾದ ಮೇಲೆ ವಿಶ್ವವು ವಿಕಿರಣ ಪ್ರಧಾನಕ್ಕಿಂತ ದ್ರವ್ಯಪ್ರಧಾನದ್ದಾಗಿತ್ತು. ಪರಮಾಣುವಿನ ರಚನೆಯು ಸ್ವತಂತ್ರ ಪ್ರೊಟೋನ್ ಮತ್ತು ಅಲ್ಫಾ ಕಣಗಳಿಂದ ಹೈಡ್ರೋಜನ್ ಮತ್ತು ಹಿಲಿಯಮ್ ಪರಮಾಣುಗಳ ರಚನೆ ಪ್ರಾರಂಭವಾಯಿತು. ಪ್ರಾರಂಭದ ನಕ್ಷತ್ರಗಳು ರಚನೆಗೊಂಡವು. ಪದ್ಯದಲ್ಲಿನ ವಿಶ್ವವೆಂಬುದೊಂದು ಹುಟ್ಟಿಕೊಂಡಿತು ಮತ್ತು ಬಯಲಿನಲ್ಲಿ ಹರಡಿಕೊಂಡಿದೆ ಮತ್ತು ಅಂದಿನಿಂದ ಕಾಲದಲ್ಲಿ ಚಾಚಿಕೊಂಡಿದೆ ಎಂಬ ಸಾಲುಗಳಿಗೆ ಹಿನ್ನೆಲೆಯು, ಮೇಲೆ ಹೇಳಿದ್ದೇ ಆಗಿದೆ.

ಪದ್ಯದಲ್ಲಿಯ, ಸೀಮಾತೀತದಿಂದ ಸೀಮಿತದೆಡೆಗೆ, ಅದ್ವೈತದಿಂದ ಅನೇಕತ್ವದೆಡೆಗೆ, ಅಮರತ್ವದಿಂದ ಮೃತ್ಯುವಿನೆಡೆಗೆ ಈ ಮೂರು ಸಾಲುಗಳ ವಿಚಾರಗಳಿಗೂ ಅರ್ಥವನ್ನು ಹಿಂದೆ ವಿವರಿಸಿದ ಮಹಾಸ್ಫೋಟವು ಹಿನ್ನೆಲೆಯನ್ನು ಒದಗಿಸುತ್ತಿದೆ.

ಮುಂದಿನ ಐದನೇ ಪದ್ಯದಲ್ಲಿ ಶೂನ್ಯವು ಎಂಥದೆಂದು ತಿಳಿಸಿದ್ದಾರೆ ಶ್ರೀಗಳವರು. ದೃಷ್ಟಿಗೆ ಗೋಚರಿಸುವಂಥದು ಅಲ್ಲ. ಸ್ಪರ್ಶಸಾಧ್ಯವೂ ಅಲ್ಲ. ಅಂದರೆ ಹಸ್ತಕೆ ನಿಲುಕುವಂಥದಲ್ಲ ಮತ್ತು ಮನದಲ್ಲಿ ನೆಲೆಸಲೂ ಕಷ್ಟ. ಕಾರಣವೇನೆಂದರೆ ಅದಕ್ಕೆ ರೂಪವೂ ಇಲ್ಲ. ಆನಂದಾತೀತವೂ ಆಗಿದೆ. ಹೀಗಿದ್ದಾಗ ಮನವು ಅದರ ಅರಿವನ್ನು ಪಡೆಯುವುದು ಹೇಗೆ ಎಂದು ಪ್ರಶ್ನಿಸಿದ್ದಾರೆ. ಹಿಂದೆ ಹೇಳಿದ ವಿವರಗಳಿಂದ ನಾವು ಕಾಣುವುದೆಲ್ಲವೂ ಶೂನ್ಯದಿಂದ ದೊರೆತದ್ದು ಮತ್ತು ಇರುವುದೆಲ್ಲವೂ ಶೂನ್ಯದ ತಳದಲ್ಲಿಯದು ಎಂಬುದು ತಿಳಿದಾಗ ಮನವು ದಿಗ್ಭ್ರಮೆಗೊಂಡು ತನ್ನನ್ನು ತಾನೆ ಕಳೆದುಕೊಳ್ಳುತ್ತದೆ. ನಾವೆಲ್ಲರೂ ಶೂನ್ಯದ ಗರ್ಭದಲ್ಲಿ ಇರುವವರು ಮತ್ತು ಶೂನ್ಯದ ಬಗ್ಗೆ ಗೊತ್ತಿರುವದು ಶೂನ್ಯವೇ ಆಗಿದ್ದರೂ ನನಗೆ ಸ್ವಲ್ಪ ಗೊತ್ತಿದೆ ಎಂದು ಕೆಲವರು ಎಂದಾಗ ಸತ್ಯ ಮುಗುಳು ನಗುತ್ತಿದೆ ಎನ್ನುವುದು ಸೌಜನ್ಯದ ಅಭಿವ್ಯಕ್ತಿ ಎನ್ನಬಹುದಲ್ಲವೇ?

### ಅಳು ಮತ್ತು ನಗು

ನೈಲ್ ನದಿ ದಂಡೆಯಲ್ಲಿ ಒಂದು ಸಂಜೆ ಒಂದು ಹಿಯೆನಾ ಮತ್ತು ಮೊಸಳೆ ಭೇಟಿಯಾಗಿ ಪರಸ್ಪರ ಅಭಿನಂದಿಸಿದವು.

ಹಿಯೆನಾ ಮೊಸಳೆಯನ್ನು ಕೇಳಿತು- "ಈ ಹೊತ್ತು ಹೇಗೆ ನಡೆದಿದೆ ಸ್ವಾಮಿ?" ಅದಕ್ಕೆ ಮೊಸಳೆ ಉತ್ತರಿಸಿ, "ಅಷ್ಟು ಒಳ್ಳೆಯದಿಲ್ಲ. ಕೆಲವು ಸಲ ನೋವು ಮತ್ತು ದುಃಖದಿಂದ ನಾನು ಅಳುತ್ತೇನೆ. ಆದರೆ ಎಲ್ಲರೂ ಯಾವಾಗಲೂ "ಅವು ಮೊಸಳೆ ಕಣ್ಣೀರು" ಎಂದು ಅಣಕಿಸುತ್ತಾರೆ. ಇದು ಮಾತಿನಿಂದ ಹೇಳಲಾಗದಷ್ಟು ನೋವುಂಟುಮಾಡುತ್ತದೆ" ಎಂದಿತು.

ಆಗ ಹಿಯೆನಾ ಹೇಳಿತು : ನೀನು ನಿನ್ನ ನೋವು ಮತ್ತು ದುಃಖ ಹೇಳುತ್ತೀಯೆ. ಆದರೆ ನನ್ನ ಬಗೆಗೂ ಒಂದು ಕ್ಷಣ ಯೋಚಿಸು. ನಾನು ಲೋಕದ ಸೌಂದರ್ಯದತ್ತ ನೋಡುತ್ತೇನೆ. ಅದರ ಅದ್ಭುತಗಳು ಮತ್ತು ಆಶ್ಚರ್ಯಗಳನ್ನು ಕಾಣುತ್ತೇನೆ. ಕೇವಲ ಸಂತೋಷಕ್ಕಾಗಿ ಹಗಲು ನಗುವಂತೆ ನಾನೂ ನಗುತ್ತೇನೆ. ಆದರೆ ಈ ಲೋಕಾರಣ್ಯದ ಜನ 'ಅದು ಹಿಯಾನಾದ ನಗು' ಎನ್ನುತ್ತಾರೆ!

-ಖಲೀಲ್ ಗಿಬ್ರಾನ್







## ಐಹಿಕ ಆಸೆಗೊಂದು ಸವಾಲು

-ರಂಜಾನ್ ದರ್ಗಾ, ಗುಲ್ಬರ್ಗ

"ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ?" ೧೨ನೇ ಶತಮಾನದ ಶರಣ ಆಯ್ದಕ್ಕಿ ಮಾರಯ್ಯನವರು ದಿನದ ಬಳಕೆಗಿಂತ ಹೆಚ್ಚಿನ ಪ್ರಮಾಣದಲ್ಲಿ ಆಯ್ದಕ್ಕಿಯನ್ನು ತಂದಾಗ ಪತ್ನಿ ಆಯ್ದಕ್ಕಿ ಲಕ್ಕಮ್ಮನವರು ಪ್ರಶ್ನಿಸಿದ ರೀತಿ ಇದು.

ಅರಸರು ಐಹಿಕ ಸಂಪತ್ತಿನ ಒಡೆಯರು. ಶಿವಭಕ್ತರು ಆಧ್ಯಾತ್ಮಿಕ ಸಂಪತ್ತಿನ ಒಡೆಯರು. ಉಳ್ಳವರು ಮತ್ತು ಶರಣರು ಉತ್ತರ ಮತ್ತು ದಕ್ಷಿಣ ಧ್ರುವಗಳಂತೆ ಬದುಕಿದವರು. ಅಂದರೆ ಐಹಿಕ ಬದುಕು ಪ್ರಧಾನವಾದ ವ್ಯವಸ್ಥೆಯನ್ನು ಅರಸ ಪ್ರತಿನಿಧಿಸಿದರೆ ಆಧ್ಯಾತ್ಮಿಕ ಬದುಕು ಪ್ರಧಾನವಾದ ವ್ಯವಸ್ಥೆಯನ್ನು ಶರಣರು ಪ್ರತಿನಿಧಿಸಿದರು. ಶರಣರು ಐಹಿಕ ಬದುಕನ್ನು ಎಂದೂ ತಿರಸ್ಕರಿಸಲಿಲ್ಲ. ಆದರೆ ಮಾನವನ ಇರುವಿಕೆ (existance)ಗೆ ಎಷ್ಟು ಬೇಕೊ ಅಷ್ಟು ಮಾತ್ರ ಐಹಿಕ ವಸ್ತುಗಳ ಬಳಕೆಯಾಗಬೇಕು. ಹೆಚ್ಚಿನ ವಸ್ತುಗಳ ಬಳಕೆಯು ಮಾನವ ಬದುಕಿ (living)ನ ಮೇಲೆ ದುಷ್ಪರಿಣಾಮ ಬೀರುತ್ತದೆ ಎಂಬ ಸತ್ಯವನ್ನು ಸಾರಿದರು.

"ಈ ಜಗತ್ತು ನಮ್ಮ ಅವಶ್ಯಕತೆಗಳನ್ನು ಪೂರೈಸಲಿಕ್ಕೆ ಇದೆ ಹೊರತಾಗಿ ದುರಾಸೆಗಳನ್ನು ಪೂರೈಸಲಿಕ್ಕೆ ಅಲ್ಲ" ಎಂದು ಗಾಂಧೀಜಿಯವರು ಹೇಳಿದ್ದಾರೆ. ಇರುವಿಕೆಗೆ ಬೇಕಾದಷ್ಟನ್ನು ಮಾತ್ರ ಪಡೆದು ಬದುಕಲು ಅಂದರೆ ವಿಶ್ವಮಾನವನಾಗಲು ಪ್ರಯತ್ನಿಸುತ್ತಿರಬೇಕು. ಅದಕ್ಕಾಗಿ ಎಷ್ಟು ಸಾಧ್ಯವೋ ಅಷ್ಟು ಅರಿವನ್ನು ಪಡೆಯಲು ಹೆಣಗಬೇಕು. ಮಾನವನ ಮನಸ್ಸು ಐಹಿಕ ವಸ್ತುಗಳಲ್ಲಿ ತಲ್ಲೀನವಾದರೆ ಜೀವಕಾರುಣ್ಯದಿಂದ ಕೂಡಿದ ಚಿಂತನೆಗಳಿಂದ ಆತ ದೂರ ಸರಿಯತೊಡಗುತ್ತಾನೆ ಎಂಬ ಎಚ್ಚರಿಕೆಯನ್ನು ಆಯ್ದಕ್ಕಿ ಲಕ್ಕಮ್ಮನವರು ನೀಡಿದ್ದಾರೆ.

ಐಹಿಕವಾಗಿ ಕಡುಬಡವರಾಗಿದ್ದ ಅನುಭಾವಿ ಲಕ್ಕಮ್ಮನವರು ಆಧ್ಯಾತ್ಮಿಕವಾಗಿ ವಿಶ್ವಮಟ್ಟದ ಶ್ರೀಮಂತರಾಗಿದ್ದಾರೆ. ಅಂತೆಯೆ ಅವರಿಗೆ ರಾಜರ ಐಹಿಕ ಬದುಕನ್ನು ಕೂಡ ಉದಾಸೀನವಾಗಿ ನೋಡುವ ಶಕ್ತಿ ಬಂದಿದೆ.

ಮಾನವ ಐಹಿಕ ವಸ್ತುಗಳ ಬಗ್ಗೆ ಉದಾಸೀನವಾದಷ್ಟು ಸರಳ ಸಹಜವಾದ ಜೀವನಕ್ಕೆ ಮಹತ್ವ ಬರುವುದು. ಈ ಜಗತ್ತಿನಲ್ಲಿ ಹೆಚ್ಚಿನ ಶಾಂತಿ ನೆಲೆಸುವುದು. ಅರಣ್ಯ ನಾಶ ಕಡಿಮೆಯಾಗುವುದು. ನದಿಗಳು ಮಾಲಿನ್ಯದ ಗಂಡಾಂತರದಿಂದ ಪಾರಾಗುವುವು. ವಾತಾವರಣವು ಕಲುಷಿತವಾಗದೆ ಉಳಿಯುವುದು. ಸಂಪನ್ಮೂಲಗಳ ಸುಲಿಗೆಗಾಗಿ ದೇಶಗಳ ಮಧ್ಯೆ ದ್ವೇಷ ಬೆಳೆಯುವುದು ನಿಲ್ಲುವುದು. ಯುದ್ಧಗಳು ನಾಶವಾಗುವುವು. ಬಾಂಬುಗಳು ನಿಷ್ಕ್ರಿಯವಾಗುವುವು. ಈ ಪೃಥ್ವಿ ನಮ್ಮ ಒಳ್ಳೆಯ ಬಳುವಳಿಯಾಗಿ ಮುಂದಿನ ಜನಾಂಗಕ್ಕೆ ಸೇರುವುದು. ದುರಾಸೆಗಳನ್ನು ಹತ್ತಿಕ್ಕದಿದ್ದರೆ ಈ ಜಗತ್ತು ನಾಶವಾಗುವುದರಲ್ಲಿ ಸಂಶಯವಿಲ್ಲ.

### ಓದುಗರ ಪ್ರತಿಕ್ರಿಯೆ

ಮಾರ್ಚ್ ತಿಂಗಳ "ಮಹಾಮನೆ" ಪತ್ರಿಕೆಯಲ್ಲಿ ಪ್ರಕಟಗೊಂಡ ರಂಜಾನ್ ದರ್ಗಾ ಅವರ "ಶರಣರೇಕೆ ಶಸ್ತ್ರ ಹಿಡಿದರು" ಎಂಬ ಲೇಖನದಲ್ಲಿ ಶರಣರು, ಕೆಳಜಾತಿಯಿಂದ ಬಂದ ಮಹಾಜ್ಞಾನಿ ಅಲ್ಲಮಪ್ರಭುಗಳನ್ನು ಬಸವಣ್ಣನವರು ಶೂನ್ಯಸಿಂಹಾಸನಾಧೀಶ್ವರರನ್ನಾಗಿಸಿ ಸಮಾನತೆಯ ನಾಂದಿ ಹಾಡಿದ್ದನ್ನು ಸಹಿಸದ ಹಾಗೂ ಸಮಗಾರ ಹರಳಯ್ಯನ ಮಗನ ಮತ್ತು ಬ್ರಾಹ್ಮಣನ ಮಗಳ ಮದುವೆ ನೆಪ ಮಾಡಿಕೊಂಡು ಶರಣರ ಹಾಗೂ ಅವರನ್ನು ನಂಬಿದ ಜನ ಸಮುದಾಯದ ಹತ್ಯಾಕಾಂಡ ಆರಂಭವಾಯಿತು. ವಚನ ಸಂಪತ್ತು ಬೆಂಕಿಗೆ ಆಹುತಿಯಾಗತೊಡಗಿದ್ದರಿಂದ, ಶರಣರು ಆತ್ಮರಕ್ಷಣೆಗೋಸ್ಕರ ಶಸ್ತ್ರ ಹಿಡಿಯಬೇಕಾಯಿತು. ಬಸವಣ್ಣನವರ ಸಹೋದರಿ ಅಕ್ಕನಾಗಮ್ಮ ಕೂಡ ವಚನ ರಕ್ಷಣೆಗೆ ಶಸ್ತ್ರಧಾರಿಯಾಗಿ ಹೋರಾಡಿದರು ಎಂದು ಹೇಳುತ್ತ ಅವರ ಆಗಿನ ಪರಿಸ್ಥಿತಿಯಲ್ಲಿ ನಡೆದ ಹಿಂಸಾಮಾರ್ಗವನ್ನು ಸಮರ್ಥಿಸಿದ್ದಾರೆ. ಈ ಹಿಂಸಾ ಕ್ರಮವು 'ಇಂಡಿಯನ್ ಪೆನಲ್ ಕೋಡ್' (ಭಾರತದ ದಂಡ ಪ್ರಕ್ರಿಯಾ ಸಂಹಿತೆಯ) ಪ್ರಕಾರ ಕೂಡ ಅಪರಾಧವಾಗಲಾರದು ಎಂಬುದನ್ನು ಇಲ್ಲಿ ಹೇಳಬಯಸುತ್ತೇನೆ.

ಇಂಡಿಯನ್ ಪೆನಲ್ ಕೋಡಿನ ವಿಧಿ ೩೦೨ರ ಪ್ರಕಾರ ಒಬ್ಬ ಮನುಷ್ಯನು ಮತ್ತೊಬ್ಬ ಮನುಷ್ಯನನ್ನು ಬುದ್ಧಿಪೂರ್ವಕವಾಗಿ ಕೊಂದರೆ, ಅದು 'ಕೊಲೆ'ಯಾಗುತ್ತದೆ. ಹಾಗೂ ಅಂಥ ಕೊಲೆಗಾರ ಸಾಯುವ ಪರ್ಯಂತ ಕಾರಾಗೃಹವಾಸ (ಲೈಫ್ ಇಂಪ್ರಿಸನ್‌ಮೆಂಟ್) ಅಥವಾ ಮರಣದಂಡನೆಯಂಥ ಶಿಕ್ಷೆಗೆ ಒಳಗಾಗುತ್ತಾನೆ. ಆದರೆ, ಅದೇ ಇಂಡಿಯನ್ ಪೆನಲ್ ಕೋಡಿನ ವಿಧಿ ಪ್ರಕಾರ ಆತ್ಮಸಂರಕ್ಷಣೆಗೋಸ್ಕರ ಕೊಲೆ ಮಾಡಿದ್ದಾದರೆ, ಅಂಥ ಒಂದು ಕೊಲೆ ಅಪರಾಧವೆನಿಸುವುದಿಲ್ಲ. ಹಾಗೂ ಅವನು ನಿರಪರಾಧಿ ಎಂದು ನಿರ್ಧರಿಸುತ್ತಾರೆ. ಆದ್ದರಿಂದ, ಶರಣರು ತಮ್ಮ ಆತ್ಮಸಂರಕ್ಷಣೆಗೋಸ್ಕರ ಹಾಗೂ ವಚನ ಸಂಪತ್ತನ್ನು ಸಂರಕ್ಷಿಸುವುದಕ್ಕೋಸ್ಕರ ಶಸ್ತ್ರ ಹಿಡಿದಿದ್ದರಿಂದ ಅದು ಹಿಂಸೆಯಾಗುವುದಿಲ್ಲ ಮತ್ತು ಅವರು ನಿರಪರಾಧಿಗಳಾಗುತ್ತಾರೆ. ಬಸವಣ್ಣನವರ ಮೂಲ ಮಂತ್ರವಾದ 'ದಯವೇ ಧರ್ಮದ ಮೂಲವಯ್ಯ' ಎಂಬ ತತ್ವಕ್ಕೆ ಕೂಡ ಯಾವ ಚ್ಯುತಿಯನ್ನೂ ತರುವುದಿಲ್ಲ.

-ರಾಜಶೇಖರ ಚಂದನಗೌಡರ, ೧೦೮೨, ಹೈಪಾಯಿಂಟ್-೧, ಅರಮನೆ ಬೀದಿ, ಬಸವೇಶ್ವರ ವೃತ್ತ, ಬೆಂಗಳೂರು - ೦೧



## ಸೇವಾದೀಕ್ಷೆ

ಬೆಂಗಳೂರು ಗ್ರಾಮಾಂತರ ಜಿಲ್ಲಾ ನೆಲಮಂಗಲ ತಾಲೂಕು ಶರಣ ಸಾಹಿತ್ಯ ಪರಿಷತ್ತಿನ ಸರ್ವ ಸದಸ್ಯರ ಸಭೆ ನಡೆದು ಶ್ರೀ ಕೆ.ಬಿ. ಶಿವಶಂಕರ್ ಅವರು ತಾಲೂಕು ಘಟಕದ ನೂತನ ಅಧ್ಯಕ್ಷರಾಗಿ ಸರ್ವಾನುಮತದಿಂದ ಆಯ್ಕೆಯಾಗಿದ್ದಾರೆ.

'ಮಹಾಮನೆ' ಸಂಪಾದಕರಾದ ಶ್ರೀ ಹೆಚ್.ಎಸ್. ಸಿದ್ದಗಂಗಪ್ಪ ಅವರ ಅಧ್ಯಕ್ಷತೆಯಲ್ಲಿ ನಡೆದ ನೂತನ ಪದಾಧಿಕಾರಿಗಳ ಸೇವಾದೀಕ್ಷಾ ಸಮಾರಂಭದ ಸಾನ್ನಿಧ್ಯವನ್ನು ನೆಲಮಂಗಲದ ಶ್ರೀ ಪವಾಡ ಬಸವಣ್ಣದೇವರ ಮಠದ ಪೂಜ್ಯ ಶ್ರೀ ಶ್ರೀ ಸಿದ್ದಲಿಂಗ ಸ್ವಾಮಿಗಳು ವಹಿಸಿದ್ದರು. ಶಿವಗಂಗಾ ಕ್ಷೇತ್ರದ ಹೊನ್ನಮ್ಮಗವಿಮಠದ ಪೂಜ್ಯ ಶ್ರೀ ಶ್ರೀ ರುದ್ರಮುನಿ ಶಿವಾಚಾರ್ಯ ಸ್ವಾಮಿಗಳು ಉದ್ಘಾಟಿಸಿದರು.

ಮನೆ ಮನೆಗಳಲ್ಲಿ ಶರಣ ಚಿಂತನ, ಶಿವಾನುಭವ ತರಬೇತಿ ಶಿಬಿರ, ಇಷ್ಟಲಿಂಗ ದೀಕ್ಷೆ, ಯೋಗ ಶಿಬಿರ, ವ್ಯಕ್ತಿತ್ವ ವಿಕಸನ-ಮೊದಲಾದ ಕಾರ್ಯಚಟುವಟಿಕೆಗಳೊಂದಿಗೆ ತಾಲೂಕ ಘಟಕಕ್ಕೆ ಹೊಸ ಚೇತನ ನೀಡಲು ನೂತನ ಪದಾಧಿಕಾರಿಗಳು ಸಂಕಲ್ಪ ಮಾಡಿದ್ದಾರೆ.

ವರದಿ : ಕೆ.ಬಿ. ಶಿವಶಂಕರ್

## ಬಸವ ಪಥಂ



ತಮಿಳುನಾಡಿನ ಭವಾನಿ ಕೂಡಲ ಸಂಗಮೇಶ್ವರ ದೇವಾಲಯದಲ್ಲಿ ಬಸವ ಸಮಿತಿ ಬೆಂಗಳೂರು ವತಿಯಿಂದ ತಮಿಳು ತ್ರೈಮಾಸಿಕ ಪತ್ರಿಕೆ 'ಬಸವಪಥಂ' ಬಿಡುಗಡೆಯಾಯಿತು. ವೇದಿಕೆಯಲ್ಲಿ : ಭವಾನಿ-ಈರೋಡ್ ಬಸವರ ಜಂಗಮ ಟ್ರಸ್ಟ್ ಅಧ್ಯಕ್ಷ ಶ್ರೀ ವಿ.ಎನ್.ಸಿ. ಕುಮಾರ್, ಶ್ರೀಮತಿ ಮತ್ತು ಶ್ರೀ ಅರವಿಂದ ಬಿ. ಜತ್ತಿ ನಾಗಸಂದ್ರ ಮಠದ ಶ್ರೀಗಳು, ಕುಂಭಕೋಣಂ ಪೆರಿಯ ಮಠದ ಶ್ರೀಗಳು ಮತ್ತು ಮಾಜಿ ಶಾಸಕ ಶ್ರೀ ಡಿ.ಸಿ.ವಿಜಯೇಂದ್ರಯ್ಯ

## ಆರೋಗ್ಯ ಶಿಬಿರ



ಶಿಬಿರ ಸಮಾರೋಪ ವೇದಿಕೆಯಲ್ಲಿ : ತಾಲೂಕ ಘಟಕಾಧ್ಯಕ್ಷ ಎಸ್.ಎನ್. ರುದ್ರಮುನಿ, ಹೊನ್ನಾಳಿ ಶಾಸಕರಾದ ಎಂ.ಪಿ. ರೇಣುಕಾಚಾರ್ಯ, ಶಿವಮೊಗ್ಗ ಶಾಸಕರಾದ ಕೆ.ಎಸ್. ಈಶ್ವರಪ್ಪ ಪೂಜ್ಯಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು, ಜಿಲ್ಲಾ ಘಟಕದ ಅಧ್ಯಕ್ಷ ಕ.ಮು.ಶಿ. ಚಂದ್ರಶೇಖರಯ್ಯ ಮತ್ತು ವಿನೋಬನಗರ ವೀರಶೈವ ಸೇವಾ ಸಮಿತಿ ಅಧ್ಯಕ್ಷ ಹೆಚ್. ಮಲ್ಲಿಕಾರ್ಜುನಸ್ವಾಮಿ

ಶಿವಮೊಗ್ಗ ತಾಲೂಕ ಶರಣ ಸಾಹಿತ್ಯ ಪರಿಷತ್ತು ಸ್ಥಳೀಯ ವಿನೋಬನಗರ ವೀರಶೈವ ಸೇವಾ ಸಮಿತಿಯ ಸಹಯೋಗ ದೊಂದಿಗೆ ಜೆ.ಎಸ್.ಎಸ್. ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯದ ತಜ್ಞವೈದ್ಯರಿಂದ ಉಚಿತ ಆಯುರ್ವೇದ ವೈದ್ಯಕೀಯ ತಪಾಸಣೆ ಮತ್ತು ಚಿಕಿತ್ಸಾ ಶಿಬಿರವನ್ನು ನಡೆಸಿತು. ಮುನ್ನೂರಕ್ಕು ಹೆಚ್ಚು ರೋಗಿಗಳು ಶಿಬಿರದ ಸೇವೆಯನ್ನು ಪಡೆದರು.

ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಗೌರವಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು ಶಿಬಿರ ಸಮಾರೋಪದ ಸಾನ್ನಿಧ್ಯ ವಹಿಸಿ ದೇಶೀಯ ವೈದ್ಯ ಪದ್ಧತಿಯ ಮಹತ್ವವನ್ನು ತಿಳಿಸಿ, ಶರಣ ಸಾಹಿತ್ಯ ಪರಿಷತ್ತು ಇಂತಹ ಸೇವಾ ಕಾರ್ಯ ಕೈಗೊಂಡಿರುವುದು ಅಭಿನಂದನೀಯ ಎಂದರು.

ವರದಿ : ಎಂ.ಜಿ. ಶಿವಕುಮಾರ್

ಮನೆಗಳಿಗೆ ಅತಿಥಿಗಳೇ ಇಲ್ಲದಿದ್ದರೆ, ಅವೆಲ್ಲ ಸ್ಮಶಾನವಾಗುತ್ತಿದ್ದವು.

-ಖಲೀಲ್ ಗಿಬ್ರಾನ್





## ಕನಸು ನನಸು ಮಾಡಿದ ಕವಿ ಮಹಾದೇವ ಬಣಕಾರ

"ಮಹಾಶರಣ ಮರುಳಸಿದ್ಧರನ್ನು ಕುರಿತು ಮಹಾಕಾವ್ಯವನ್ನು ರಚಿಸಿದ ಹಿರಿಯ ವಚನಕಾರ, ಕವಿ ಮಹದೇವ ಬಣಕಾರರು ಸಿರಿಗೆರೆ ಮಠದ ಹಿರಿಯ ಗುರುಗಳಾಗಿದ್ದ ಲಿಂ. ಶಿವಕುಮಾರ ಸ್ವಾಮಿಗಳವರ ಕನಸನ್ನು ನನಸು ಮಾಡಿದರು" ಎಂದು ಡಾ. ಪ್ರೇಮಾ ಶಿರ್ಸೆ ಅವರು ಹೇಳಿದರು.

ಬೀದರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಸ್ಥಳೀಯ ಬಸವತತ್ತ್ವ ಶಿಕ್ಷಣ ಸಂಸ್ಥೆಯಲ್ಲಿ ಏರ್ಪಡಿಸಿದ್ದ ದತ್ತಿ ಉಪನ್ಯಾಸ ನೀಡುತ್ತಿದ್ದ ಅವರು "ವಿಶ್ವಬಂಧು ಮರುಳಸಿದ್ಧ" ಎಂಬ ವಿಷಯ ಕುರಿತು ಮಾತನಾಡಿದರು.

ಸಾನ್ನಿಧ್ಯ ವಹಿಸಿದ್ದ ಭಾಲ್ಕಿ ಹಿರೇಮಠದ ಪೂಜ್ಯ ಶ್ರೀ ಬಸವಲಿಂಗ ಪಟ್ಟದ್ದೇವರು ಲಿಂ. ಮಹಾದೇವ ಬಣಕಾರರ ಸಾಹಿತ್ಯ ಸೇವೆಯಿಂದ ಸಮಾಜಕ್ಕೆ ತುಂಬ ಉಪಕಾರವಾಗಿದೆಯೆಂದು ತಿಳಿಸಿದರು.

ಆರಂಭದಲ್ಲಿ ಜಿಲ್ಲಾ ಘಟಕದ ಅಧ್ಯಕ್ಷರಾದ ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿ ಅವರು ಸ್ವಾಗತ ಬಯಸಿ, ದತ್ತಿ ದಾನಿಗಳಾದ ಹೆಚ್.ಟಿ. ಬಸವರಾಜಪ್ಪ ಮತ್ತು ಕೆ.ಪಿ. ಸಿದ್ದಂಗಮ್ಮ ಅವರ ಕೊಡುಗೆಯನ್ನು ಸ್ಮರಿಸಿದರು. ಬೇಲೂರು ಶ್ರೀ ಉರಿಲಿಂಗಪೆದ್ದಿ ಮಠದ ಶ್ರೀ ಪಂಚಾಕ್ಷರಿ ಸ್ವಾಮಿ ಅವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ವೈಜನಾಥ್ ಕಮಠಾಣೆ ಸಂಸ್ಥೆಯ ಅಧ್ಯಕ್ಷರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

ಮುಖ್ಯ ಅತಿಥಿಗಳಾಗಿ ಹಿರಿಯ ಸಾಹಿತಿ ಡಾ. ವೀರೇಂದ್ರ ಸಿಂಪಿ, ಶ್ರೀ ಶರಣಪ್ಪ ಮಿಟಾರೆ, ಶ್ರೀ ಮುರಲೀಧರ ಕುಲಕರ್ಣಿ, ಡಾ. ಈಶ್ವರಯ್ಯಾ ಕಲ್ಯಾಣರಾವ್ ಚೌಳಕಾಪುರೆ ಮೊದಲಾದವರಿದ್ದರು. ಯೋಗೇಂದ್ರ ಮದ್ದಾಪುರ ವಂದನೆ ಸಲ್ಲಿಸಿದರು.

ವರದಿ : ಪಂಚಾಕ್ಷರಿ ಪುಣ್ಯಶೆಟ್ಟಿ

### ಶಿವಮೊಗ್ಗ ಜಿಲ್ಲೆ



ಎಡಚಿತ್ರ : ಭದ್ರಾವತಿ ತಾಲೂಕ ಶರಣ ಸಾಹಿತ್ಯ ಪರಿಷತ್ತು ಅರಳಹಳ್ಳಿಯ ವೀರಶೈವ ಅಣ್ಣನ ಬಳಗದ ಸಹಯೋಗದಲ್ಲಿ ಏರ್ಪಡಿಸಿದ್ದ ೩೩೩ನೆಯ ವಚನ ಮಂಟಪ ಕಾರ್ಯಕ್ರಮ. ಪೂಜ್ಯ ಶ್ರೀ ಶ್ರೀ ಪಂಡಿತಾರಾಧ್ಯ ಮಹಾಸ್ವಾಮಿಗಳ ದಿವ್ಯ ಸಾನ್ನಿಧ್ಯ. ವೇದಿಕೆಯಲ್ಲಿ : ವೀರಶೈವ ಅಣ್ಣನ ಬಳಗದ ಅಧ್ಯಕ್ಷ ಕೆ.ಬಿ. ಹೇಮಕುಮಾರ್ ಉಪನ್ಯಾಸಕ ಡಾ. ಡಿ.ಸಿ. ರಾಜಪ್ಪ, ತಾಲೂಕ ಘಟಕಾಧ್ಯಕ್ಷ ಟಿ.ಎಸ್. ಪಂಚಾಕ್ಷರಪ್ಪ ಮತ್ತಿತರರು.

ನಾನು ಇನ್ನೊಬ್ಬರ ಅಭಿಪ್ರಾಯವನ್ನು ಎಂದೂ ಒಪ್ಪಿಕೊಂಡಿಲ್ಲ.
ಆದರೆ ವಾಸ್ತವ ಸಂಗತಿಯ ತತ್ವ ನಮ್ಮಿಬ್ಬರ ಮಧ್ಯೆಯೇ ಇರುವಂತೆ ಕಾಣುತ್ತದೆ.

-ಖಲೀಲ್ ಗಿಬ್ರಾನ್

## ಬಳ್ಳಾರಿ ಜಿಲ್ಲೆ

### ಮಹಾಮನೆ ಕಾರ್ಯಕ್ರಮ




ಹೊಸಪೇಟೆ ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು-ದಿನಾಂಕ ೨೫-೪-೦೫ರಂದು ನಡೆದ ೪೮ನೇ ಮಹಾಮನೆ ಕಾರ್ಯಕ್ರಮ. ವೇದಿಕೆಯಲ್ಲಿ : ಘಟಕಾಧ್ಯಕ್ಷ ಜಿ. ಬಸಪ್ಪ, ಉಪನ್ಯಾಸಕರಾದ ಡಾ. ಮೂಡಲಗಿರಿ ಕೊಟ್ರೇಶ್, ಅಧ್ಯಕ್ಷತೆ ವಹಿಸಿದ್ದ ವಿಶ್ರಾಂತ ಪ್ರಾಂಶುಪಾಲ ಹೆಚ್. ಬಸವಣ್ಣೆಪ್ಪ, ಮುಖ್ಯ ಅತಿಥಿ ಮಲ್ಲಾರಿ ದೀಕ್ಷಿತ್, ಭಕ್ತಿಸೇವೆಗೈದ ಛತ್ರಪ್ಪ ಮತ್ತು ಲತಾದೇವಿ.




ಬಳ್ಳಾರಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಮತ್ತು ಡಾ. ಬಿ.ಆರ್. ಅಂಬೇಡ್ಕರ್ ಸಂಘದ ಸಹಯೋಗದಲ್ಲಿ ೩ನೆಯ ಮಹಾಮನೆ ಕಾರ್ಯಕ್ರಮ. ವೇದಿಕೆಯಲ್ಲಿ : ಮುಖ್ಯ ಅತಿಥಿ ಕೆ. ವೀರಬಸಪ್ಪ, ಈ. ರಾಮಪ್ಪ, ಉಪನ್ಯಾಸಕ ಸೋಮೇಶ್ ಉಪ್ಪಾರ್ ಮತ್ತು ಜಿಲ್ಲಾ ಘಟಕಾಧ್ಯಕ್ಷ ಕೆ.ಬಿ. ಸಿದ್ಧಲಿಂಗಪ್ಪ. ಈ ಸಂದರ್ಭದಲ್ಲಿ ಅಂಬೇಡ್ಕರ್ ಸಂಘದ ಅಧ್ಯಕ್ಷರಾದ ಈ. ರಾಮಪ್ಪ ಅವರು ತಮ್ಮ ತಂದೆ-ತಾಯಿಗಳ ಸ್ಮರಣಾರ್ಥ ಪ್ರಕಟಿಸಿರುವ ವಚನ ಸಂಜೀವಿನಿ ಮಾಲಿಕೆಯ ೧೬ನೆಯ 'ಉರಿಲಿಂಗಪೆದ್ದಿ ಕಾಳವ್ವೆ' ಎಂಬ ಕೃತಿ ಬಿಡುಗಡೆಯಾಯಿತು.

ವರದಿ : ಕೆ.ಬಿ. ಸಿದ್ಧಲಿಂಗಪ್ಪ

## ದಾವಣಗೆರೆ ಜಿಲ್ಲೆ




ದಾವಣಗೆರೆ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು : ಚನ್ನಗಿರಿ ತಾಲೂಕು ಘಟಕದ ಗೌರವಾಧ್ಯಕ್ಷರಾದ ಜಿ.ಎಂ. ಪರಮೇಶ್ವರಪ್ಪವರ ನಿವಾಸ 'ಕೃಷಿ' ಆವರಣದಲ್ಲಿ ಪರಿಷತ್ತಿನ ೧೭ನೇ ಮಾಸಿಕ ಮಹಾಮನೆ ಕಾರ್ಯಕ್ರಮ. ಪೂಜ್ಯ ಶ್ರೀ ಗುರುಬಸವ ಸ್ವಾಮಿಗಳ ಸಾನ್ನಿಧ್ಯ. ತಾಲೂಕು ಘಟಕದ ಅಧ್ಯಕ್ಷ ಹೆಚ್.ಎಸ್. ಮಲ್ಲಿಕಾರ್ಜುನಪ್ಪ ಅಧ್ಯಕ್ಷತೆ. ಕರ್ನಾಟಕ ರಾಜ್ಯ ರೈತ ಸಂಘದ ಮಹಾಪ್ರಧಾನ ಕಾರ್ಯದರ್ಶಿ ಕೋಡಿಹಳ್ಳಿ ಚಂದ್ರಶೇಖರ್ ಅವರಿಂದ 'ರೈತ ಮತ್ತು ಶರಣ ಧರ್ಮ' ಕುರಿತು ಉಪನ್ಯಾಸ. ಜಿಲ್ಲಾ ಘಟಕದ ಅಧ್ಯಕ್ಷ ಚಿಕ್ಕೊಳ್ ಈಶ್ವರಪ್ಪ, ನಿವೃತ್ತ ಬೆಸ್ಕಾಂ ಸೂಪರಿಂಟೆಂಡೆಂಟ್ ಇಂಜಿನಿಯರ್ ಜಿ.ಎಂ. ಶಂಕರಪ್ಪ, ತಹಶೀಲ್ದಾರ್ ಸಿ.ಬಿ. ಸಜ್ಜನಶೆಟ್ಟರ್

ವರದಿ : ಚಿಕ್ಕೊಳ್ ಈಶ್ವರಪ್ಪ





## ತುಮಕೂರು ಜಿಲ್ಲೆ

### ಶರಣ ಸಾಹಿತ್ಯ ಚಿಂತನ



ತುಮಕೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು : ಹಾರೋನಹಳ್ಳಿಯಲ್ಲಿ ೩೦ ದಿವಸಗಳ ಶರಣ ಸಾಹಿತ್ಯ ಸಿಂಚನ ಕಾರ್ಯಕ್ರಮ. ವೇದಿಕೆಯಲ್ಲಿ : ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಆರ್.ಎಸ್. ಸದಾನಂದ ಅವರಿಂದ ಉದ್ಘಾಟನೆ. ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪ್ರೊ. ಹ.ಬ. ಮಹದೇವಪ್ಪ, ಕಾರ್ಯದರ್ಶಿ ಶಿವಕುಮಾರ್, ಶಾಂತಪ್ಪ, ಸುರೇಶ್ ಮೊದಲಾದವರು.

## ಗದಗ ಜಿಲ್ಲೆ



ಶಿರಹಟ್ಟಿ ತಾಲ್ಲೂಕು ಕದಳಿ ವೇದಿಕೆ ೪೮ನೆಯ ವಚನೋತ್ಸವ :
ಮನೆ: ಶ್ರೀಮತಿ ಅರುಂಧತಿ ಬಿಂಕದಕಟ್ಟಿ
ಅಧ್ಯಕ್ಷತೆ : ಸುಮಾ ಪಾಟೀಲ
ಅತಿಥಿಗಳು : ಕು. ಗಿರಿಜಾ ಮ್ಯಾಗೇರಿ
ವಿಶ್ಲೇಷಣೆ: ಶಕುಂತಲಾ ಮಂಜಿ.

ವರದಿ : ಪ್ರೇಮಕ್ಕ ಬಿಂಕದಕಟ್ಟಿ

### ಜಿ.ವಿ. ಶಿವಸ್ವಾಮಿಯವರನ್ನು ನೆನೆದು

ಶ್ರೀ ವೇದಾಂತಿ ವೀರಭದ್ರ ಶಾಸ್ತ್ರಿಗಳ ಸುಪುತ್ರರು
ಶ್ರೀಮತಿ ಬಸಮ್ಮನವರ ಚೈತನ್ಯದ ಚಿಲುಮೆಯು ನೀವು.
ರಾಮನಗರ ತಾಲ್ಲೂಕಿನ ದೊಡ್ಡಗಂಗವಾಡಿ ಊರಿನವರು
ಎಂ.ಎ. ಸಂಸ್ಕೃತದಲ್ಲಿ ಪದವಿ ಪಡೆದವರು
ಶಿಕ್ಷಕ ವೃತ್ತಿಗಾಗಿ ಬಿ.ಇಡಿ. ತರಬೇತಿಯನ್ನು ಪಡೆದವರು ನೀವು.
ಸಾಹಿತಿಗಳಾಗಿ, ಸಂಪಾದಕರಾಗಿ, ವಾಗ್ಮಿಗಳಾಗಿ ಚಿರಪರಿಚಿತರು
ಕೆಲವು ಗ್ರಂಥಗಳ, ಹಲವು ಲೇಖನಗಳ ಕರ್ತೃ ನೀವು.
ರಾಮನಗರ ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದವರು
ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾಗಿದ್ದವರು.
ಬೆಂಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ
ಅಧ್ಯಕ್ಷರಾಗಿದ್ದವರು ನೀವು.
ಬೆಂಗಳೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ
ಅಧ್ಯಕ್ಷರಾಗಿದ್ದವರು ನೀವು.
ಮಹಾನಗರಪಾಲಿಕೆ ಶಿಕ್ಷಕರ ಸಂಘದ ಪ್ರಧಾನ
ಕಾರ್ಯದರ್ಶಿಯಾಗಿದ್ದವರು
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಪ್ರಧಾನ
ಕಾರ್ಯದರ್ಶಿಗಳಾಗಿದ್ದವರು ನೀವು.
ಗ್ರಂಥ ಪ್ರಕಟಣೆ, ಸಂಪಾದನೆ, ಸಂಘ-ಸಂಸ್ಥೆಗಳಲ್ಲಿ
ಸೇವೆ ಸಲ್ಲಿಸಿರುವವರು
ಶ್ರೀಮಠಗಳು, ಸಂಘ-ಸಂಸ್ಥೆಗಳಿಂದ ಪ್ರಶಸ್ತಿಗಳನ್ನು
ಪಡೆದವರು ನೀವು.

ಸನ್ಮಾನ, ಪ್ರಶಂಸೆಗಳನ್ನು ಜನ ಸಾಮಾನ್ಯರಿಂದ ಪಡೆದು
ಇಹಲೋಕದಿಂದ, ಪರಲೋಕಕ್ಕೆ ಹೋದ ನಿಮಗೆ ನಾನು
ಸಲ್ಲಿಸುತ್ತಿರುವ ಭಕ್ತಿಪೂರ್ವಕ ಶ್ರದ್ಧಾಂಜಲಿ! ಶ್ರದ್ಧಾಂಜಲಿ!

-ಎನ್.ಆರ್. ಶಿವಕುಮಾರ

(ಪರಿಷತ್ತಿನ ಪ್ರಧಾನ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಿದ ಲಿಂಗೈಕ್ಯ ಜಿ.ವಿ. ಶಿವಸ್ವಾಮಿ ಅವರ ಪ್ರಥಮ ವರ್ಷದ ಸ್ಮರಣೆಗಾಗಿ)





## ಪ್ರಕಟಣೆಗಳು

### ಕೃತಿ-ಸ್ವೀಕೃತಿ

- **ನಿರಾಭಾರಿ**
  ಸಂ :ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ
  ಪ್ರ :ಕಲ್ಯಾಣ ಕರ್ನಾಟಕ ಪ್ರಕಾಶನ
  ಬಸವ ಮುಕ್ತಿ ಮಂದಿರ, ಬಸವನಗರ
  ಬೀದರ - 585 403
  ಮು:2005; ಪು: 324; ಬೆ: 150ರೂ.

- **ಸಾಂಸ್ಕೃತಿಕ ವೀರಶೈವ**
  ಲೇ : ಎಂ.ಜಿ. ನಾಗರಾಜ್
  ಪ್ರ :ಶ್ರೀ ದೇಗುಲಮಠ, ಕನಕಪುರ
  ಬೆಂಗಳೂರು ಗ್ರಾಮಾಂತರ ಜಿಲ್ಲೆ
  ಮು: 2005; ಪು: 196; ಬೆ: 50ರೂ.

- **ಸಮರ್ಪಿತ**
  ಸಂ : ಚಂದ್ರಶೇಖರ ವಸ್ತ್ರದ
  ಕ.ಮು.ಶಿ. ಚಂದ್ರಶೇಖರಯ್ಯ
  ಪ್ರ :ಶ್ರೀ ಮುರುಘ ರಾಜೇಂದ್ರ ಮಠ
  ಚೆಕ್ಕಿನ ಕಲ್ಮಠ, ಶಿವಮೊಗ್ಗ
  ಮು: 2005; ಪು: 157; ಬೆ: 40ರೂ.

- **ಶಿವಮುಖ**
  ಸಂ : ಬಳ್ಳೇಕೆರೆ ಹನುಮಂತಪ್ಪ
  ಪ್ರ :ಶ್ರೀ ಮುರುಘರಾಜೇಂದ್ರ ಮಠ
  ಚೆಕ್ಕಿನ ಕಲ್ಮಠ, ಶಿವಮೊಗ್ಗ
  ಮು: 2005; ಪು: 332; ಬೆ: 350ರೂ.

- **ದಿವ್ಯ ಮೌನದ ದೇಶಗಳಲ್ಲಿ**
  ಲೇ : ತ್ರಿವೇಣಿ ಶಿವಕುಮಾರ್
  ಪ್ರ :ಪ್ರಭುದೀಪ ಪ್ರಕಾಶನ
  230, 14ನೆಯ ಕ್ರಾಸ್, ಎಂ.ಸಿ. ಬಡಾವಣೆ,
  ವಿಜಯನಗರ, ಬೆಂಗಳೂರು - 560 040
  ಮು: 2005; ಪು: 168; ಬೆ: 100ರೂ.

- **ಗ್ರಾಮ ಚೇತನ**
  ಸಂ : ಕೆ.ಆರ್. ಕಮಲೇಶ್
  ಪ್ರ : ಎಂ.ವಿ. ರಾಜಶೇಖರನ್ ಅಭಿನಂದನ ಸಮಿತಿ
  ನಂ. 4, 12ನೆಯ ಮುಖ್ಯರಸ್ತೆ
  ವಸಂತನಗರ, ಬೆಂಗಳೂರು - 560 052
  ಮು: 2005; ಪು: 904; ಬೆ: 750ರೂ.

- **ಶೂನ್ಯ ಸಂಪಾದನೆಗಳು**
  ಲೇ : ಡಾ. ಬಿ.ವಿ. ಮಲ್ಲಾಪುರ
  ಪ್ರ : ಲಿಂಗಾಯತ ಅಧ್ಯಯನ ಅಕಾಡಮಿ
  ನಾಗನೂರು ರುದ್ರಾಕ್ಷಿಮಠ. ಶಿವಬಸವನಗರ, ಬೆಳಗಾವಿ-10
  ಮು: 2004; ಪು: 102; ಬೆ: 50ರೂ.

- **ಪ್ರವಾಹ (ಕವನ ಸಂಕಲನ)**
  ಲೇ : ಕಲ್ಯಾಣಿ ವೆಂಕಟರಾಮನ್
  ಪ್ರ : ಲೇಖಕರೇ
  21-E, Nutech Ayappa Enclave
  Sri Madhavan Road, Mahalingapuram
  Channai - 600 034
  ಮು: 2005; ಪು: 80; ಬೆ: 30ರೂ.

- **ನಿರ್ವಾಣ ಶ್ರೀ**
  ಪ್ರ.ಸಂ : ಎನ್. ಬಸವಾರಾಧ್ಯ
  ಪ್ರ :ಶ್ರೀ ದೇಗುಲಮಠ, ಕನಕಪುರ
  ಬೆಂಗಳೂರು ಗ್ರಾಮಾಂತರ ಜಿಲ್ಲೆ
  ಮು: 2005; ಪು: 472; ಬೆ: 200ರೂ.

- **ದೇಗುಲ ಸಂಪದ**
  ಸಂ : ಎಂ.ಜಿ. ನಾಗರಾಜ್ ; ಹೆಚ್.ಎಸ್. ಸಿದ್ಧಗಂಗಪ್ಪ
  ಪ್ರ :ಶ್ರೀ ದೇಗುಲಮಠ, ಕನಕಪುರ
  ಬೆಂಗಳೂರು ಗ್ರಾಮಾಂತರ ಜಿಲ್ಲೆ
  ಮು: 2005; ಪು: 312; ಬೆ: 100ರೂ.

- **ಲಿಂಗಾಯತ ದರ್ಶನ-1**
  ಲೇ.: ಡಾ. ಎನ್. ಜಿ. ಮಹಾದೇವಪ್ಪ
  ಪ್ರ :ಲಿಂಗಾಯತ ಅಧ್ಯಯನ ಅಕಾಡಮಿ
  ನಾಗನೂರ ರುದ್ರಾಕ್ಷಿಮಠ, ಶಿವಬಸವನಗರ
  ಬೆಳಗಾವಿ-10
  ಮು: 2004; ಪು: 32; ಬೆ: 5ರೂ.

- **ಆರಾಧ್ಯ ಸಂಪದ**
  ಸಂ : ಡಾ. ಎಸ್. ವಿದ್ಯಾಶಂಕರ
  ಪ್ರ :ಪ್ರೊ. ಎನ್. ಬಸವಾರಾಧ್ಯ ಅಭಿನಂದನ ಸಮಿತಿ
  ಜ್ಞಾನಜ್ಯೋತಿ ವಿದ್ಯಾಮಂದಿರ, ರಾಜಾಜಿನಗರ
  ಬೆಂಗಳೂರು-560 010
  ಮು: 2005; ಪು: 1070; ಬೆ: 400ರೂ.

- **ಗಜಲ್ ಮತ್ತು ಬಿಡಿ ದ್ವಿಪದಿ**
  ಲೇ : ಶಾಂತರಸ
  ಪ್ರ :ಸಿ.ವಿ.ಜಿ. ಪಬ್ಲಿಕೇಷನ್ಸ್
  10, 2ನೆಯ ಮುಖ್ಯರಸ್ತೆ, ಜಬ್ಬಾರ್ ಬ್ಲಾಕ್
  ವೈಯಾಳಿ ಕಾವಲ್, ಬೆಂಗಳೂರು - 560 003
  ಮು: 2004; ಪು: 158; ಬೆ: 120ರೂ.

MAHAMANE

Magazine Registration No. RNI 68294/97 -
Postal Registration No. CPMG/KA/BGS - 167/2003-05
Posted at Jayanagar H.P.O. on 5th of every month

June - 2005

# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ರಿ.)

ಮೈಸೂರು

### ಸದಸ್ಯತ್ವ ವಿವರ

| | |
|---|---|
| ಮಹಾಪೋಷಕರು | - 5000 ರೂ. |
| ಪೋಷಕರು | - 3000 ರೂ. |
| ದಾತೃಗಳು | - 1000 ರೂ. |
| ಆಜೀವ | - 300 ರೂ. |
| ವಾರ್ಷಿಕ | - 30 ರೂ. |

### ಸದಸ್ಯ ಸಂಸ್ಥೆಗಳು

| | |
|---|---|
| ಪೋಷಕ | - 2000 ರೂ. |
| ಆಜೀವ | - 1000 ರೂ. |
| ವಾರ್ಷಿಕ | - 100 ರೂ. |

### ಮಹಾಮನೆ ಜಾಹಿರಾತು ದರ

| | |
|---|---|
| ರಕ್ಷಾಪುಟ - 4 | ರೂ. 5,000 |
| ರಕ್ಷಾಪುಟ - 2 ಅಥವಾ 3 | ರೂ. 3,000 |
| ಒಳಪುಟ - ವಿಶೇಷ | ರೂ. 2,000 |
| ಒಳಪುಟ ಸಾಧಾರಣ | ರೂ. 1,000 |
| ಅರ್ಧಪುಟ | ರೂ. 600 |

## ಮಹಾಮನೆ ಚಂದಾದಾರರ ಗಮನಕ್ಕೆ

'ಮಹಾಮನೆ'ಗೆ ವಾರ್ಷಿಕ ಸದಸ್ಯರಾದವರು ದಯವಿಟ್ಟು ಸಕಾಲದಲ್ಲಿ ತಮ್ಮ ಸದಸ್ಯತ್ವವನ್ನು ನವೀಕರಿಸಿ ಸಹಕರಿಸಬೇಕಾಗಿ ವಿನಂತಿ. ಸದಸ್ಯತ್ವದ ಅವಧಿ ಮುಗಿದ ಮೇಲೂ 'ಮಹಾಮನೆ' ನಿಮ್ಮ ಮನೆಗೆ ಬರುವುದು ಕಷ್ಟವಾಗುತ್ತದೆ.

ನಿಮ್ಮ ಚಂದಾ ಅವಧಿ ಮುಗಿಯುವ ದಿನಾಂಕವನ್ನು 'ಮಹಾಮನೆ'ಯ ಲಕೋಟೆಯ ಮೇಲಿರುವ ನಿಮ್ಮ ವಿಳಾಸದ ಮೇಲೆ ಕಾಣಿಸಿದೆ. ದಯವಿಟ್ಟು ಗಮನಿಸಿ.

ವರ್ಷಕೊಮ್ಮೆ 100ರೂ. ಕಳುಹಿಸುವುದು ನಿಮ್ಮ ಕಾರ್ಯಭಾರದಲ್ಲಿ ಮರೆತುಹೋಗಿ ಬಿಡಬಹುದು. ಅದಕ್ಕೆ ಬದಲಾಗಿ ಒಮ್ಮೆಗೇ 500 ರೂ. ಕಳುಹಿಸಿ ಅಜೀವ ಸದಸ್ಯತ್ವ ಪಡೆದರೆ ನಮಗೆ ಮತ್ತು ನಿಮಗೆ ಇಬ್ಬರಿಗೂ ಅನುಕೂಲ.

ದಯವಿಟ್ಟು ಸಹಕರಿಸಿ.

- **ಪ್ರಕಾಶಕರು.**

ಜಾಹಿರಾತುಗಳ ಸಾಹಿತ್ಯದ ಜೊತೆಗೆ ಮತ್ತು ಶುಲ್ಕವನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕಾರ್ಯಾಲಯಕ್ಕೆ ಕ್ರಾಸ್ ಮಾಡಿದ ಡಿ.ಡಿ. ಅಥವಾ ಮನಿ ಆರ್ಡರ್ ಮೂಲಕ "ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು **(ಮಹಾಮನೆ)**" ಈ ಹೆಸರಲ್ಲಿ ಕಳುಹಿಸಬೇಕು.

- ಸಂಪಾದಕರು

### 'ಮಹಾಮನೆ' ಚಂದಾ ವಿವರ

| | |
|---|---|
| ಆಜೀವ ಸದಸ್ಯತ್ವ | 500-00 |
| ವಾರ್ಷಿಕ ಸದಸ್ಯತ್ವ | 100-00 |
| ಬಿಡಿ ಸಂಚಿಕೆ | 10-00 |

Published by : **Akhila Bharatha Sharana Sahithya Parishat (Regd.)**
1st Main, Shivarathrishwara Cricle, 8th Block, Jayanagar, Bangalore - 560 070
Printed by : **Lakshmi Mudranalaya,** 5th Main, Chamarajpet, Bangalore - 560 018
Editors : **M.G. Nagaraj and H.S. Siddagangappa**